# ಕುಂತಲೇಶ್ವರ

ಐತಿಹಾಸಿಕ ಕಾದಂಬರಿ

ಲೇಖಕ

ಶ್ರೀ ದೇಸಾಯಿ ಪಾಂಡುರಂಗರಾಯರು ಎಂ. ಎ.

['ವಿಜಯನಗರ ಸಾಮ್ರಾಜ್ಯ', 'ಮಿಂಚಿನ ಮುಡಿಳಿಯರು',
ಗ್ರಂಥಗಳ ಕರ್ತಾರರು]

ಪ್ರಕಾಶಕರು :

ವಸಂತ ಗ್ರಂಥಮಾಲಾ

೬೩, ಗಾಂಧೀ ನಗರ, ಬೆಂಗಳೂರು

೧೯೪೩] [ಬೆಲೆ ರೂ. ೧.

ಸಲಹೆಗಾರರ ಮಂಡಳಿ :

ಶ್ರೀ ಸಿ. ಕೆ. ವೆಂಕಟರಾಮಯ್ಯ, ಎಂ.ಎ., ಎಲ್ಎಲ್. ಬಿ
ಪ್ರೊ. ರಂ. ವಾ. ಜಾಗಿರದಾರ್, ಎಂ.ಎ. (ಲಂಡನ್)
ಪ್ರೊ. ಕೆ. ಜಿ. ಕುಂದಣಗಾರ್, ಎಂ.ಎ.
ಶ್ರೀ ಸಿ. ಎಫ್. ಅಂಗಡಿ
ಪ್ರೊ. ಪಡುಕೋಣೆ ರಮಾನಂದ, ಬಿ.ಎಸ್‌ಸಿ., ಎಲ್.ಟಿ.



ಮುದ್ರಕರು
ಹೆಚ್. ಎಲ್. ಪ್ರಸಾದ್, ಟ್ರೂ ಪ್ರೆಸ್,
ಪತ್ರಪ್ಪ ರೋಡ್, ಬೆಂಗಳೂರು ಸಿಟಿ.

# ನಮ್ಮ ಮಾತು

ನಾಡಿನ ಇತಿಹಾಸವೆಂದರೆ ರಕ್ತಪಾತದ ವೃತ್ತಾಂತ, ಸಾಮ್ರಾಜ್ಯ ಸುಲಿಗೆಗಾರರ ಅನಂತದಾಹದ ಚಾರಿತ್ರ್ಯವೆಂಬ ಕಲ್ಪನೆ ಇಂದು ದೂರವಾಗುತ್ತಿದೆ. ಮಾರ್ಸ್ಡನ್, ರಾಲಿಸನ್, ಥಾಂಸನ್, ಮೊದಲಾದ ಇತಿಹಾಸಕಾರರು ಕಟ್ಟಿದ ಭಾರತೀಯ ಇತಿಹಾಸದ ವಿಪರ್ಯಾಸಸೌಧ ಇಂದು ಕೃಷ್ಣಸ್ವಾಮಿ ಅಯ್ಯಂಗಾರ್, ಯದುನಾಥ ಸರ್ಕಾರ್, ಹೆರಾಸ್, ಸಿವಿಲ್, ಸಾಲತೊರೆಯವರ ನೋಟಕ್ಕೆ ಎಡೆಕೊಟ್ಟಿದೆ. ನಾಡಿನ ಇತಿಹಾಸ ಅಧರ್ಮ ಸಾಂಸ್ಕೃತಿಕ ಬೆಳವಳಿಗೆಯ ಇತಿವೃತ್ತವೆಂಬ ಭಾವನೆ ಜನತೆಯ ಮನಸ್ಸಿನಲ್ಲಿ ಬೇರೂರುತ್ತ ಬರುತ್ತಿದೆ.

ಕರ್ನಾಟಕ ಎಲ್ಲ ವಿಷಯಗಳಲ್ಲಿಯೂ ಹಿಂದುಳಿದಿರುವಂತೆ ಇತಿಹಾಸ ರಚನೆಯಲ್ಲಿಯೂ ತುಂಬ ಹಿಂದುಳಿದಿದೆ. ಸ್ವತಂತ್ರ ಸಂಸ್ಕೃತಿಯೊಂದನ್ನು ಬೆಳಸಿಕೊಂಡು, ಹಲವು ಮಹಾ ಸಾಮ್ರಾಜ್ಯಗಳ ಹುಟ್ಟಿಗೆ ಕಾರಣವಾದ ಕನ್ನಡನಾಡಿನ ಸಮಗ್ರ ಇತಿಹಾಸ ಇನ್ನೂ ತಾಮ್ರಶಾಸನ, ನಾಣ್ಯಗಳು, ಓಲೇಗರಿಯಲ್ಲಿಯೇ ಅಡಕವಾಗಿ ಕುಳಿತಿದೆ. ಈ ಪರಿಸ್ಥಿತಿಯನ್ನು ಹೋಗಲಾಡಿಸಿ ನಾಡಿನ ಭವ್ಯ ಇತಿಹಾಸವನ್ನು ಕಟ್ಟುತ್ತಿರುವವರಲ್ಲಿ ಶ್ರೀ ದೇಸಾಯಿ ಪಾಂಡುರಂಗರಾಯರೊಬ್ಬರು. ಇವರ 'ವಿಜಯನಗರ ಸಾಮ್ರಾಜ್ಯ' ಗ್ರಂಥ, ಮತ್ತು ಐತಿಹಾಸಿಕ ಲೇಖನಗಳು ಈಗಾಗಲೆ ವಿದ್ವಜ್ಜನರ ಮೆಚ್ಚುಗೆಯನ್ನು ಪಡೆದಿವೆ. ಕರ್ನಾಟಕದ ಅತ್ಯಂತ ವೈಭವ ಕಾಲಗಳಲ್ಲಿ ಒಂದಾದ ಕುಂತಲರ ಯುಗವನ್ನು ಅವಲಂಬಿಸಿ ಶ್ರೀಯುತರು ಈ ಕಾದಂಬರಿಯನ್ನು ವಿರಚಿಸಿದ್ದಾರೆ. ಇತಿಹಾಸವನ್ನು ತೂರಿಬಿಡದೆ, ಕಲೆಯನ್ನು ಮರೆಯದೆ ಸುವರ್ಣ ಮಧ್ಯ ಮಾರ್ಗವೊಂದನ್ನನುಸರಿಸಿ 'ಕುಂತಲೇಶ್ವರ' ವಿರಚಿತವಾಗಿದೆಯೆಂದು ಓದುಗರಿಗೆ ಮನವರಿಕೆಯಾಗದಿರದು.

ಇತಿಹಾಸವೇ ಇನ್ನೂ ಶೈಶವಾವಸ್ಥೆಯಲ್ಲಿರುವಾಗ ಐತಿಹಾಸಿಕ ಕಥೆ ಕಾದಂಬರಿಗಳು ನಮ್ಮಲ್ಲಿ ಸಾಕಷ್ಟು ಬಂದಿಲ್ಲವೆಂಬುದೇನೂ ಅಚ್ಚರಿಯಲ್ಲ. ಆ ಕೊರತೆಯನ್ನು 'ವಸಂತ ಗ್ರಂಥಮಾಲೆ' ತನ್ನ ಶಕ್ತ್ಯನುಸಾರ ನೀಗಿಸಲು

ಪ್ರಯತ್ನಿಸುತ್ತಿದೆ. 'ಕುಂತಲೇಶ್ವರ' ಅಂತಹ ಪ್ರಯತ್ನದಲ್ಲಿ ನಾವಿಟ್ಟ ಒಂದಡಿ; ಮೊದಲಡಿ.

'ಕುಂತಲೇಶ್ವರ' ಬರೆದವರೇ ಹೇಳಿರುವಂತೆ ಹೆಚ್ಚು ಒಲವನ್ನು ಇತಿಹಾಸದ ಕಡೆಗೆ ತೋರಿರಬಹುದು. ಇತಿಹಾಸದ ತಡಿಕೆಯ ಮೇಲೆ ಕುಸುರಿ ಕೆಲಸ ಮಾಡುವುದು ಒಂದು ಬಗೆಯಾದರೆ ಕಲೆಯ ತಡಿಕೆಯ ಮೇಲೆ ಇತಿಹಾಸದ ರಾಗೋದ್ದೀಪನ ಮಾಡುವುದು ಇನ್ನೊಂದು ಬಗೆ. ಇತಿಹಾಸಜ್ಞರಾದ ಶ್ರೀ ದೇಸಾಯಿ ಪಾಂಡುರಂಗರಾಯರು ಎರಡನೆಯ ಮಾರ್ಗವನ್ನು ಅವಲಂಬಿಸಿರುವುದನ್ನು ಓದುಗರು ಕಾಣಬಹುದು.

ಇಂತಹ ಉತ್ತಮ ಕಾದಂಬರಿಯನ್ನು ಬರೆದು ನಮ್ಮ ಮಾಲೆಯಲ್ಲಿ ಪೋಣಿಸಲು ಅವಕಾಶಕೊಟ್ಟ ಶ್ರೀಯುತರನ್ನು ನಾವು ಹೃತ್ಪೂರ್ವಕ ಅಭಿನಂದಿಸಲಿಚ್ಛಿಸುತ್ತೇವೆ.

೧೬-೯-೧೯೪೩ ಪ್ರಕಾಶಕರು

# ಕುಂತಲೇಶ್ವರ

---

‘ಕುಂತಲೇಶ್ವರ’ ಇದೊಂದು ಚಿಕ್ಕ ಕಾದಂಬರಿ. ಇದರ ಕಥಾವಸ್ತು ಚರಿತ್ರೆಗೆ ಸಂಬಂಧಿಸಿದುದರಿಂದ ಇದು ಐತಿಹಾಸಿಕ ಕಾದಂಬರಿ ಎಂದು ಗುರುತಿಟ್ಟು ಹೆಸರಿಸಬಹುದು. ಕಾದಂಬರಿಗಳು ಸಾಮಾನ್ಯವಾಗಿ ವಿಸ್ತಾರವುಳ್ಳವು ಆಗಿರುವುವು. ಆದರೆ ಸಣ್ಣಕತೆ, ಏಕಾಂಕ ನಾಟಕ, ಚಲನಚಿತ್ರಗಳ ಈ ಯುಗದಲ್ಲಿ ಕಾದಂಬರಿಯಾದರೂ ಸಂಕ್ಷೇಪ ಹೊಂದಿ ‘ಸಣ್ಣ ಕಾದಂಬರಿ’ಯ ರೂಪದಲ್ಲಿ ಪ್ರಕಟವಾಗುವುದು ಉಚಿತವೆಂದೇ ಹೇಳಬಹುದು. ಈ ಕಾದಂಬರಿಯ ಕಥಾವಸ್ತು ಕಿರಿದರಲ್ಲಿ ಇಂತು :

ಕುಂತಲ, ಎಂದರೆ ಕರ್ನಾಟಕದ ಚಕ್ರೇಶ್ವರನಾದ ಚಾಲುಕ್ಯಕುಲದ ಆರ್ಪಡಿ ವಿಕ್ರಮಾದಿತ್ಯನು ಕಲ್ಯಾಣ ರಾಜಧಾನಿಯಲ್ಲಿ ಸುಖಸಂಕಥಾ ವಿನೋದದಿಂದ ರಾಜ್ಯಪರಿಪಾಲನೆ ಮಾಡುತ್ತಿರುವನು. ಅನೇಕ ವಿಜಯಗಳನ್ನು ಸಂಪಾದಿಸಿ ವಿಸ್ತೃತವಾದ ಸಾಮ್ರಾಜ್ಯಕ್ಕೆ ಅಧಿಪತಿಯಾದ ಈತನು, ಇನ್ನು ಮೇಲೆ ಸಮರವು ಬೇಡ, ಶಾಂತಿಯೇ ಚಿರಕಾಲ ಬಾಳಲಿ, ತನ್ನ ರಾಷ್ಟ್ರವು ನಿರಾತಂಕವಾಗಿ ಸುಖ ಸಂತೋಷಗಳಿಂದ ಸಮೃದ್ಧಿಗೊಳ್ಳಲಿ, ಎಂದು ಬಯಸುತ್ತಿರುವನು. ಆದರೆ ಆತನ ಎಣಿಕೆಗೆ ಎಡರುಗಳು ಒಡ್ಡಿ ಬರುವುವು. ಸಾಮ್ರಾಜ್ಯದ ದಕ್ಷಿಣ ಭಾಗದಲ್ಲಿ ಹೊಯ್ಸಳ ವಂಶದ ವಿಷ್ಣುದೇವ ಇಲ್ಲವೆ ಬಿಟ್ಟಿದೇವನೆಂಬ ಸಾಮಂತರಾಜನು ಆಳುತ್ತಿದ್ದು, ಆತನು ಪರಾಕ್ರಮಿಯೂ ಮಹಾತ್ವಾಕಾಂಕ್ಷಿಯೂ ಆಗಿರುವನು. ವಿಕ್ರಮಾದಿತ್ಯನ ಸಾರ್ವಭೌಮ ಅಧಿಕಾರವನ್ನು ಪ್ರತಿಭಟಿಸಿ ಸ್ವತಂತ್ರನಾಗಬೇಕೆಂಬ ಅಭಿಲಾಷೆಯಿಂದ ಆತನು ಕಣ್ಣೆಗಾಲ ಎಂಬ ಸ್ಥಳದಲ್ಲಿ ವಿಕ್ರಮಾದಿತ್ಯನ ಸೈನ್ಯದ ಮೇಲೆ ಏರಾಟ ಮಾಡಿ ಅದನ್ನು ಸೋಲಿಸುವನು. ಇದರಿಂದ ಆತನ ಮಹತ್ವಾಕಾಂಕ್ಷೆ ಪುಟನೆಗೆದು ಆತನು ತನ್ನಂತೆ ವಿಕ್ರಮಾದಿತ್ಯನ ಆಧಿಪತ್ಯವನ್ನು ಕಿತ್ತೊಗೆಯಲೆಳಸುವ ಸಾಮ್ರಾಜ್ಯ ವಿರೋಧಿಗಳ ವ್ಯೂಹವನ್ನು ರಚಿಸುವನು.

ಈ ವ್ಯೂಹದಲ್ಲಿ ಕೆಲ ಮಾಂಡಲಿಕ ಅರಸರು ಸೇರಿಕೊಳ್ಳುವರು. ಈ ಅನರ್ಥವನ್ನು ಮುಂಗಂಡ ವಿಕ್ರಮಾದಿತ್ಯನು ಸಾಮ್ರಾಜ್ಯ ವಿರೋಧಿಗಳ ತಂತ್ರವನ್ನು ತುಂಡರಿಸಲು ಉಪಾಯವನ್ನು ಕೈಕೊಳ್ಳುವನು. ತನಗೆ ಅತ್ಯಂತ ವಿಶ್ವಾಸುಕನೂ ಸ್ವಾಮಿಭಕ್ತನೂ ಶೂರನೂ ಆದ ಎರಂಬರಗೆಯ ಮಹಾಮಂಡಲೇಶ್ವರ ಆಚರಸನನ್ನು ರಾಜಧಾನಿಗೆ ಕರೆಯಿಸಿಕೊಂಡು ತನ್ನ ಸೈನ್ಯದ ಆಧಿಪತ್ಯವನ್ನು ಆತನಿಗೆ ಒಪ್ಪಿಸುವನು. ಈ ಹೊತ್ತಿಗೆ ಬಿಟ್ಟಿದೇವ ಮತ್ತು ಆತನ ಜೊತೆಗಾರರು ಬೇರೆ ಬೇರೆ ದಿಕ್ಕಿನಿಂದ ವಿಕ್ರಮಾದಿತ್ಯನ ರಾಜ್ಯದ ಮೇಲೆ ಏರಾಟ ಹೂಡಿದ ಸಮಾಚಾರಗಳು ಬರುವುವು. ಕೂಡಲೆ ಆಚರಸನು ಅವರ ಮೇಲೆ ಎತ್ತುಗಡೆ ಮಾಡುವನು. ಹೊಯ್ಸಳ ಬಿಟ್ಟಿದೇವ ನೊಳಂಬವಾಡಿಯ ಪಾಂಡ್ಯ, ಕರಾಡದ ಶಿಲಾಹಾರ ಮತ್ತು ಗೋವೆಯ ಕಾದಂಬ ಈ ನಾಲ್ಕು ಅರಸರ ಪಡೆಗಳನ್ನು ಅಲ್ಲಲ್ಲಿ ಸೋಲಿಸಿ ಪಡುವಣ ಘಟ್ಟವಿಳಿದು ಕಾದಂಬ ಜಯಕೇಸಿಯ ರಾಜಧಾನಿಯಾದ ಗೋವೆಯನ್ನು ಸೂರೆಗೊಳ್ಳುವನು. ಆತನ ಈ ಅದ್ಭುತವಾದ ಸಾಹಸಕೃತಿಗಳಿಂದ ಸಂತುಷ್ಟನಾದ ವಿಕ್ರಮಾದಿತ್ಯನು ಆತನನ್ನು ಗೌರವಿಸುವುದಕ್ಕಾಗಿ ವಿಜಯೋತ್ಸವವನ್ನು ನೆರವೇರಿಸುವ ಸಂಕಲ್ಪ ಮಾಡುವನು. ಈ ನಡುವೆ ವಿಕ್ರಮಾದಿತ್ಯನ ವಿಜ್ಞಾಪನೆಯ ಮೇರೆಗೆ ಆತನ ಗುರುಗಳಾದ ವಿಜ್ಞಾನೇಶ್ವರ ಯತಿಗಳು ರಚಿಸುತ್ತಿರುವ ಯಾಜ್ಞವಲ್ಕ್ಯಸ್ಮೃತಿಯನ್ನು ಅನುಲಕ್ಷಿಸಿದ 'ಮಿತಾಕ್ಷರಾ' ಎಂಬ ಟೀಕಾಗ್ರಂಥವು ಮುಗಿಯುತ್ತ ಬಂದಿರುವುದು. ಈ ಸಂದರ್ಭದಿಂದ ಅವರೊಡನೆ ಮಾತನಾಡುತ್ತಿರುವಾಗ 'ಕೇವಲ ದಂಡಪ್ರಯೋಗದಿಂದ ಶಾಂತಿ ಸ್ಥಾಪನೆ ಆಗಲಾರದು' ಎಂದು ಯತಿಗಳು ವಿಕ್ರಮಾದಿತ್ಯನಿಗೆ ಸೂಚಿಸುವರು. ಆಚರಸನು ಗೋವೆಯನ್ನು ಸೂರೆಗೊಂಡು ತಿರುಗಿ ಬರುವುದರೊಳಗೆ ಅತ್ತ ಕೊಂಕಣದಲ್ಲಿ ಕಾದಂಬ ರಾಜನಾದ ಜಯಕೇಸಿ ತನ್ನ ಪರಾಭವದ ಸೇಡನ್ನು ತೀರಿಸಿಕೊಳ್ಳಲು ಹವಣಿಸುತ್ತಿದ್ದು, ಬಿಟ್ಟಿದೇವನ ಪ್ರೋತ್ಸಾಹದಿಂದ ಸಾಮ್ರಾಜ್ಯಶಕ್ತಿಯೊಡನೆ, ಇನ್ನೊಮ್ಮೆ ಹೋರಾಡಲು ಅಣಿಯಾಗುತ್ತಿರುವ ವರ್ತಮಾನ ವಿಕ್ರಮಾದಿತ್ಯನಿಗೆ ತಲುಪುವದು. ಇದರಿಂದ ಇತನು ಮತ್ತೆ ಚಿಂತೆಗೆ ಒಳಗಾಗುವನು. ಈ ಅವಾಂತರವನ್ನು ತಪ್ಪಿಸಲು ಯತಿಗಳು ಒಂದು ಹಂಚಿಕೆಯನ್ನು ಹೇಳುವರು. ಅದನ್ನು ಅನುಸರಿಸಿ ತನ್ನ ಮಗಳಾದ ಮೈಳಲ

ದೇವಿಯನ್ನು ಜಯಕೇಶಿಗೆ ಧಾರೆಯೆರೆಯಲು ಆತನು ಮನಸ್ಸು ಮಾಡುವನು. ಆದರೆ ಆಕೆಯ ಮೇಲೆ ಒತ್ತಾಯವಾಗದಂತೆ ಆಕೆಯ ಬಗೆಯೊಲವನ್ನು ಸೂಕ್ಷ್ಮವಾಗಿ ತಿಳಿದುಕೊಳ್ಳಲು ಪ್ರಯತ್ನಿಸುವಾಗ ಆಕೆ ಈ ಮೊದಲೇ ಜಯಕೇಸಿಯನ್ನು ಹೃತ್ಪೂರ್ವಕ ಪ್ರೀತಿಸುತ್ತಿರುವಳು ಎಂಬ ಸಂಗತಿ ಪ್ರಕಟವಾಗಿ ಆತನ ಆನಂದವು ಉಕ್ಕುವುದು.

ಜಯಕೇಸಿಯೊಡನೆ ಮದುವೆಯ ಮಾತುಕತೆಗಳು ಮುಂದುವರಿಯುತ್ತಿರುವಾಗ ಆಚರಸನು ರಾಜಧಾನಿಗೆ ಬಂದು ಬಿಡುವನು. ಆತನ ವಿಜಯವನ್ನು ಗೌರವಿಸುವ ಮತ್ತು 'ಮಿತಾಕ್ಷರಾ' ಗ್ರಂಥವನ್ನು ಪ್ರಕಾಶನಗೊಳಿಸುವ ಉದ್ದೇಶದಿಂದ ಉತ್ಸವವು ಏರ್ಪಡುವುದು. ಈ ಎರಡು ಸಮಾರಂಭಗಳ ಜೊತೆಗೆ ಆಸ್ಥಾನಕವಿ ಕಾಶ್ಮೀರದೇಶದ ವಿದ್ಯಾಪತಿ ಬಿಹ್ಲಣನು ರಚಿಸಿದ 'ವಿಕ್ರಮಾಂಕದೇವಚರಿತಂ' ಎಂಬ ಸಂಸ್ಕೃತ ಕಾವ್ಯದ ಪ್ರಕಟನೆಯ ಮತ್ತು ಇನ್ನೆರಡು ಸಮಾರಂಭಗಳು ಸೇರಿ 'ಗೆಲುವಿನ ಹಬ್ಬ' ಎಂಬ ಮಹೋತ್ಸವವು ಅನೂಚಾನವಾಗಿ ಐದು ದಿನಗಳವರೆಗೆ ನಡೆಯುವುದು. ಮುಂದೆ ಸ್ವಲ್ಪ ದಿನಗಳಲ್ಲಿಯೇ ಜಯಕೇಸಿಯೊಡನೆ ಮೈಲಳದೇವಿಯ ಕಲ್ಯಾಣ ಸಮಾರಂಭವು ಒದಗಿ ಎಲ್ಲವು ಸುಮಂಗಲದಲ್ಲಿ ಸಮಾಪ್ತಿಗೊಳ್ಳುವುದು.

ಈ ಕತೆಯ ನೆರೆಯಲ್ಲಿ ಅಂದಿನ ಕರ್ನಾಟಕದ ರಾಜಕೀಯ ಮತ್ತು ಸಾಂಸ್ಕೃತಿಕ ಪರಿಸ್ಥಿತಿಯ ಚಿತ್ರವು ಈ ಕಾದಂಬರಿಯಲ್ಲಿ ಪ್ರತಿಬಿಂಬಿತವಾಗಿದೆ. ಕರ್ನಾಟಕದ ಚರಿತ್ರೆಯಲ್ಲಿ ಕಾಂತಿಯುತವಾದ ಹನ್ನೆರಡನೆಯ ಶತಮಾನವು ಈ ಕತೆಯ ಕಾಲವು, ಈ ಕಾಲದಲ್ಲಿ ಕರ್ನಾಟಕವು ಅನೇಕ ಪರಿಯಿಂದ ಉದಿತೋದಿತವಾಗಿತ್ತು. ಕರ್ನಾಟಕದ ಉತ್ತಮೋತ್ತಮ ಅರಸರಲ್ಲಿ ಅಗ್ರಗಣ್ಯನಾದ ಚಾಲುಕ್ಯ ವಿಕ್ರಮಾದಿತ್ಯನು ಸುದೀರ್ಘಕಾಲದವರೆಗೆ ಆಳುತ್ತ ಹಿತಕರವಾದ ತನ್ನ ಆಡಳಿತದಿಂದ ಧರ್ಮ, ವಿದ್ಯೆ, ಕಲೆ, ಮೊದಲಾದುವುಗಳನ್ನು ಪರಿಪೋಷಿಸಿ ಜನಾಂಗವನ್ನು ಬಹುವಾಗಿ ಉನ್ನತಗೊಳಿಸಿದನು. ಈತನ ಚರಿತ್ರೆ ಅರಸರಿಗೆ ಆದರ್ಶರೂಪವಾಗಿದೆ. ಅಪ್ರತಿಮ ವೀರನಾಗಿದ್ದರೂ ಯುದ್ಧವೇ ಜೀವನದ ಧ್ಯೇಯವೆಂದು ಈತನು ತಿಳಿದಿರಲಿಲ್ಲ. ತಾನು ಸಂಪಾದಿಸಿದ ಪ್ರಚಂಡವಾದ ಸಾಮ್ರಾಜ್ಯಶಕ್ತಿ ಮತ್ತು ಘನವಾದ ರಾಜಕೀಯ ಪ್ರಭಾವ ಇವುಗಳ ನಿಜವಾದ ಪ್ರಯೋಜನ ಲೋಕ ಕಲ್ಯಾಣವೆಂದು

ಈತನು ಭಾವಿಸಿದ್ದನು. ಉದಾತ್ತವಾದ ಈತನ ಈ ರಾಜನೀತಿಯ ರಹಸ್ಯವನ್ನು ಈ ಕಾದಂಬರಿಯಲ್ಲಿ ಎತ್ತಿ ತೋರಿಸಲಾಗಿದೆ.

ಕಾದಂಬರಿಯ ಪರಿಸಮಾಪ್ತಿ ವಿವಾಹದಿಂದ ಆಗುತ್ತಿದ್ದರೂ ಹಳೆಯ ಸಂಪ್ರದಾಯದಂತೆ ಹೆಣ್ಣು–ಗಂಡಿನ ಮದುವೆ ಮಾಡಿಸುವುದಾಗಲಿ, ಹೊಸ ಬೆಡಗಿನಂತೆ ಯುವಕ-ಯುವತಿಯರ ಪ್ರಣಯ ಲೀಲೆಯನ್ನು ಬಣ್ಣಿಸುವುದಾಗಲಿ ಈ ಕತೆಯ ನೇರವಾದ ಗುರಿಯಾಗಿಲ್ಲ. ಪ್ರಣಯಕ್ಕೆ ಸಲ್ಲಬೇಕಾದ ಸ್ಥಾನವೂ ಗೌರವವೂ ಇಲ್ಲಿ ದೊರೆತಿದ್ದರೂ ಪ್ರಣಯವೇ ಇದರ ಪ್ರಧಾನ ವಿಷಯವಾಗಿಲ್ಲ. ಪ್ರಣಯದಂತೆ ಜೀವನದಲ್ಲಿ ಮುಖ್ಯವಾದ ಇತರ ಸಂನಿವೇಶಗಳಿಗೂ ಇಲ್ಲಿ ಇಂಬು ದೊರೆತಿದೆ. ಇದು ಪ್ರಾಯಿಕವಾಗಿ ಚಾರಿತ್ರಕ ಕಥೆಯಾದುದರಿಂದ ರಾಜನೀತಿ, ಯುದ್ಧ ಮೊದಲಾದ ಸಂನಿವೇಶಗಳು ಹೆಚ್ಚಾಗಿ ಓದುಗರ ಗಮನವನ್ನು ಸೆಳೆದುಕೊಳ್ಳುವುವು. ಆನುಷಂಗಿಕವಾಗಿ ಶೃಂಗಾರ, ವಿನೋದ, ಕಾವ್ಯಾಲಾಪದ ಸಲ್ಲಾಪಗಳು ರಂಜನೆಯನ್ನು ನೀಡುವುವು.

ಸಾಮಾನ್ಯ ಪದ್ಧತಿಯಂತೆ ಕಲೆಯ ನಾಯಕನು ಇಂತಹನೊಬ್ಬನು ಎಂದು ಇಲ್ಲಿ ಬೆರಳಿಟ್ಟು ಹೇಳುವುದು ಸುಕರವಾಗಿಲ್ಲ. ಆಚರಸ, ವಿಕ್ರಮಾದಿತ್ಯ ಜಯಕೇಸಿ ಇವರೆಲ್ಲರು ಒಂದೊಂದು ಪರಿಯಿಂದ ಈ ಸ್ಥಾನಕ್ಕೆ ಅರ್ಹರು. ಚಿಕ್ಕದಾದ ಈ ಕಾದಂಬರಿಯಲ್ಲಿ ಸಂನಿವೇಶಗಳ ವಿಸ್ತಾರಕ್ಕೂ ಪಾತ್ರಗಳ ಸ್ವಭಾವ ಘೋಷಣೆಗೂ ಸಾಕಷ್ಟು ಅವಕಾಶ ಸಿಕ್ಕಿರುವುದಿಲ್ಲ. ಆದರೆ ದೊಡ್ಡ ವಿಗ್ರಹದಂತೆ ಚಿಕ್ಕಬೊಂಬೆಯಲ್ಲಿಯೂ ತಕ್ಕಮಟ್ಟಿಗೆ ಕಣ್ಣು, ಕಿವಿ, ಮೊದಲಾದ ಅವಯವಗಳು ಕಂಗೊಳಿಸುವಂತೆ ವಿಕ್ರಮಾದಿತ್ಯ, ಮೈಳಲದೇವಿ, ಚಂದ್ರಲೇಖೆ, ಆಚರಸ ಮೊದಲಾದ ಪಾತ್ರಗಳ ಸ್ವಭಾವ ವೈಶಿಷ್ಟ್ಯವು ಉಚಿತಪ್ರಮಾಣದಲ್ಲಿ ಪ್ರಕಟವಾಗಿದೆ. ಕಾದಂಬರಿಯ ಕೆಲ ಭಾಗ ಚಾರಿತ್ರಕ ನಿರೂಪಣೆಯಂತೆ ಭಾಸವಾದರೂ ಗೂಢತೆಯ ಆವರಣ, ಘಟನೆಗಳ ಆಕಸ್ಮಿಕತೆ, ಸಂನಿವೇಶಗಳ ಚಮತ್ಕೃತಿ, ಇವುಗಳು ಅಲ್ಲಲ್ಲಿ ಬೆರೆತುಕೊಂಡು ಕಲೆಯ ಸ್ವಾದವನ್ನು ಕಾಯ್ದುಕೊಳ್ಳದೇ ಇಲ್ಲ.

ಅನ್ವೇಷಣದಿಂದ ವೇದ್ಯವಾದ ಚರಿತ್ರೆಯ ಅನೇಕ ನಿಜಾಂಶಗಳು ಈ ಕಾದಂಬರಿಯ ಆಧಾರ ಸಾಮುಗ್ರಿಯಾಗಿವೆ. ಆದುದರಿಂದ ಇದು ಚಾರಿ

ತ್ರಕ ಮಾತ್ರವಲ್ಲದೇ ಚರಿತ್ರಾತ್ಮಕ ಕಾದಂಬರಿ ಆಗಿದೆ ಎಂದು ಒಂದು ವಿಧ ವಾಗಿ ಹೇಳಬಹುದು. ಕೆಲರು ಇದರಲ್ಲಿ ಕಾದಂಬರೀಕಾರನ ಕೈಚಳಕಕ್ಕಿಂತ ಇತಿಹಾಸಕಾರನ ಮೈಬೆಳಕನ್ನು ಹೆಚ್ಚಾಗಿ ಕಾಣಬಹುದು. ಆದರೆ ಇದು ಕೇವಲ ಚರಿತ್ರೆಯೆಂದು ಯಾರೂ ಭ್ರಮಿಸದಿರಲಿ, ಅಸಾಧಾರಣ ಕಾದಂಬರೀ ಕಾರನ ಅದ್ಭುತ ಇಂದ್ರಜಾಲವಿದ್ಯೆ ಒಂದುವೇಳೆ ಇಲ್ಲದಿದ್ದರೂ ಸಾಮಾನ್ಯ ಕೌಶಲದ ಕಲ್ಪಕತೆ ಇಲ್ಲಿ ಸಾಕಷ್ಟು ಆಟವಾಗಿದೆ. ಇದನ್ನು, ಮುಖ್ಯವಾಗಿ ಸಂನಿವೇಶಗಳ ಸಂಯೋಜನೆಯನ್ನು ಅವಲೋಕಿಸುವಂತಿದೆ. ಚರಿತ್ರೆ ಯಲ್ಲಿಯ ಕೆಲ ಸಂಗತಿಗಳು ಇಲ್ಲಿ ಮುಂದಾಗಿರಬಹುದು. ಕೆಲ ವ್ಯಕ್ತಿಗಳೂ ರಚನೆಗಳೂ ಹುಟ್ಟಿ ಹೊಸ ಬಣ್ಣವನ್ನು ಬೀರಿರಬಹುದು. ಇಂತಹವುಗಳು ಚರಿತ್ರೆಗೆ ಬಾಧಕವಾದರೂ ಕಾದಂಬರಿಗೆ ಕುಂದಕವಲ್ಲ. ಇಂತಹ ಎಡೆಗಳಲ್ಲಿ ಮೂಲವನ್ನು ವಿಕಾರಗೊಳಿಸದೆ ತನ್ನ ಸೊತ್ತಾದ ಕಲ್ಪನಾ ಸ್ವಾತಂತ್ರ್ಯವನ್ನು ಇಷ್ಟದಂತೆ ಉಪಯೋಗಿಸಿದುದಕ್ಕಾಗಿ ಇತಿಹಾಸಜ್ಞರು ಕಾದಂಬರೀಕಾರ ವನ್ನು ದೂರಿಕೊಳ್ಳುವ ಅಗತ್ಯವಿಲ್ಲ. ಚಾರಿತ್ರಕ ಕಾದಂಬರಿ ಚರಿತ್ರೆಯಲ್ಲ ಚರಿತ್ರೆಯ ಆಭಾಸ ಎಂದು ಕೆಲರು ಹೇಳುವರು. ಈ ಮಾತನ್ನು ಈ ಕಾದಂಬರಿಯ ವಿಷಯದಲ್ಲಿ ಸ್ವಲ್ಪ ಮಾರ್ಪಡಿಸಿ ಇದು ಚರಿತ್ರೆಯ ಛಾಯೆ ಎಂದು ಹೇಳಿದರೆ ಸರಿಯಾದೀತು.

ಕೊನೆಯದಾಗಿ ಈ ಚಿಕ್ಕ ಕಾದಂಬರಿಯ ಮಾನದಂಡವು ಬೃಹತ್ ಕಾದಂಬರಿಯುದಲ್ಲ. ಸಣ್ಣಕತೆಯಂತೆ ಸಣ್ಣಕಾದಂಬರಿ ಎಂಬ ಒಂದು ಸಾಹಿತ್ಯರೂಪದ ಇರುವಿಕೆಯನ್ನು ಗಮನಿಸಿ ಆ ಅಳತೆಗೋಲಿನಿಂದ ಇದನ್ನು ಅಳೆದುತೂಗಿ ಪರಿಕಿಸಬಹುದು ಎಂದು ಬಲ್ಲವರಿಗೆ ಬಿನ್ನವಿಸುವೆ.

—**ದೇಸಾಯಿ ಪಾಂಡುರಂಗ**

---

# ಪರಿವಿಡಿ

# ಕುಂತಲೇಶ್ವರ

✤

## ಕಿರಣ ಒಂದು

## ದಳವಾಯಿ

"ಗೆಲುವಕ್ಕೆ ಗೆಲುವಕ್ಕೆ ಸಿರಿದೇವಿಗೆ ।
ಬೆಳುವಲದಿ ಬೆಳಗುತಿಪ ಮಹಜ್ಯೋತಿಗೆ ॥

ವೀರರನು ಉಕ್ಕಿಸುವ ವೀರಜನನಿಯೆ ನೀನು ।
ಧೀರರನು ಲೆಕ್ಕಿಸುವ ಧೀರಮಾತೆಯೆ ನೀನು ॥ ೧

ಒಡೆಯರನು ಕಾಪಿಡುವ ಸಿರಿಯು ಒಡತಿಯೆ ಅಹುದು ।
ಬಡವರನು ಒಪ್ಪಿಡುವ ಭಾಗ್ಯನಿಧಿ ಅಹುದು ॥ ೨

ಸರಿಯುಂಟೆ ಲೋಕದೊಳು ನಿನಗೆ ಒಲುಮೆಯ ತಾಯೆ ।
ಇರದೆ ನಮಿಪೆನು ತಾಯೆ ಹೇ ಮಹಾಮಾಯೇ ॥ ೩

ಗೆಲುವಕ್ಕೆ ಗೆಲುವಕ್ಕೆ . . . ."

ಮುಕ್ತಕಂಠದಿಂದ ಸ್ವಚ್ಛಂದವಾಗಿ ಈ ಹಾಡನ್ನು ಹಾಡುತ್ತಿದ್ದ ದನಿ ಹಾಡನ್ನು ಮುಗಿಸಿ ಒಂದು ನುಟ್ಟಕ್ಕೆ ಬಂದು ನಿಂತಂತೆ ತೋರಿತು. ಒಂದೆರಡು ನಿಮಿಷ ಕಳೆದುವು. ಖಟ್ ಎಂಬ ಕಡಿತದ ಏಟು. ಮರುಕ್ಷಣ ಮತ್ತೆ ಆ ಹಾಡಿನ ಸ್ವರ. ಆದರೆ ಇದೀಗ ಆ ಹಾಡಿನ ಜೊತೆಯಲ್ಲಿ ಖಟ್-ಖಟ್ ಎಂಬ ಕಡಿತದ ಸಪ್ಪಳ ನಿಯಮಿತವಾಗಿ ಅದಕ್ಕೆ ತಾಳಹಾಕುವಂತೆ ಮುಂದುವರಿಯಿತು. 'ಗೆಲುವಕ್ಕೆ—' ಒಂದು ಕಡಿತದ ಏಟು; 'ಗೆಲುವಕ್ಕೆ'—ಇನ್ನೊಂದು ಏಟು; 'ಸಿರಿದೇವಿಗೇ—' ಮತ್ತೊಂದು ಏಟು. ಈ ಕ್ರಮವು ಹಾಡಿನ ನೆರೆಯಲ್ಲಿ ಅನೂಚಾನವಾಗಿ ನಡೆಯಿತು.

ಅಡವಿಯಲ್ಲಿ ಎಲ್ಲಿಂದಲೋ ಕೇಳಬರುತ್ತಿದ್ದ ಈ ಸದ್ದು ಆ ಅಡವಿಯ ಮಾರ್ಗವಾಗಿ ಕುದುರೆಯೇರಿ ಹೋಗುತ್ತಿದ್ದ ಒಬ್ಬ ರಾಹುತನ ಗಮನವನ್ನು ಸೆಳೆದಿತು. ಆತನು ಕುದುರೆಯ ಕಡಿವಾಣವನ್ನು ಎಳೆದುಹಿಡಿದು ಕಿವಿಗೊಟ್ಟು

ಆ ಧ್ವನಿಯನ್ನು ಕೇಳಿದನು. ಆ ಮೇಲೆ ಮನಸ್ಸಿನಲ್ಲಿ ಏನೋ ಒಂದು ನಿರ್ಧಾರಮಾಡಿ ಚೆಂಗನೆ ಕುದುರೆಯ ಮೇಲಿಂದ ನೆಲಕ್ಕೆ ನೆಗೆದನು. ಪಕ್ಕದ ಒಂದು ಮರದ ಕೊಂಬೆಗೆ ಕುದುರೆಯನ್ನು ಕಟ್ಟಿ ಆ ಸಪ್ಪಳದ ಜಾಡುಹಿಡಿದು ಅದರ ದಿಕ್ಕಿಗೆ ಹೊರಟನು

ಸ್ವಲ್ಪ ದಾರಿ ಹೋದಬಳಿಕ ರಾಹುತನಿಗೆ ಆ ಹಾಡುಗಾರನ ಗುರುತು ಸಿಕ್ಕಿದಂತೆ ತೋರಿತು. ಆಗ ಆತನು ತನ್ನಲ್ಲಿಯೇ ನಕ್ಕನು. ತನ್ನ ಹಾಡಿನಲ್ಲಿಯೂ ಮರಕಡಿಯುವ ಕೆಲಸವಲ್ಲಿಯೂ ನಿಮಗ್ನನಾಗಿದ್ದ ಹಾಡುಗಾರನಿಗೆ ಯಾರೋ ತನ್ನ ಹತ್ತಿರ ಬರುತ್ತಿರುವರು ಎಂಬುದರ ಅರಿವು ಆಗಲಿಲ್ಲ. ಎರಡನೆಯ ಸಲ ಆ ಹಾಡು ಮುಗಿಯುವ ಹೊತ್ತಿಗೆ ರಾಹುತನು ಆ ಮರದ ಕೆಳಗೆ ಗುಂಪಾಗಿ ಬೆಳೆದಿದ್ದ ಪೊದೆಯ ಮರೆಯಲ್ಲಿ ಬಂದು ನಿಂತುಕೊಂಡಿದ್ದನು. ಮರದ ಮೇಲಿದ್ದ ಹಾಡುಗಾರನು ನಿಂತುಕೊಂಡು, "ಇರದೆ ನಿಮಿಷನು ಕಾಯೆ ಹೇ ಮಹಾಮಾಯೆ!" ಎನ್ನುತ್ತ ಭಕ್ತಿಭಾವದಿಂದ ಮೈಮರೆತು ಎರಡು ಕೈಗಳನ್ನು ಜೋಡಿಸಿ ನಮಸ್ಕಾರ ಮಾಡಿದನು. ಹೀಗೆ ಮಾಡುವಾಗ ಆತನ ಕೈಯಲ್ಲಿ ಹಿಡಿದಿದ್ದ ಕೊಡಲಿ ಜಾರಿ ಕೆಳಗೆ ಬಿದ್ದು ಪೊದೆಯಲ್ಲಿ ಮಾಯವಾಯಿತು.

ಕೊಡಲಿ ಕೈತಪ್ಪಿಸಿ ಕೊಂಡೊಡನೆ ಹಾಡುಗಾರನಿಗೆ ವೈಯರಿವು ಬಂದಿತು. ಕೊಡಲಿ ಎಲ್ಲಿ ಬಿದ್ದಿತೋ ಎಂದು ಆತನು ಕೆಳಗೆ ಬಗ್ಗಿ ಕಣ್ಣರಳಿಸಿ ನೋಡತೊಡಗಿದನು. ಅಷ್ಟರಲ್ಲಿ ಆತನಿಗೆ ಹಿಂಬದಿಯಿಂದ ಗಂಭೀರವಾಗಿ ಈ ಶಬ್ದಗಳು ಕೇಳಬಂದುವು: "ಎಲವೋ ಭಕ್ತಾ! ನಿನ್ನ ಭಾವನೆಗೆ ಮೆಚ್ಚಿದ್ದೇನೆ; ಇಷ್ಟವಾದ ವರವನ್ನು ಬೇಡು."

ನಿರ್ಮಾನುಷ ಅಡವಿಯಲ್ಲಿ ಇದ್ದಕ್ಕಿದ್ದ ಹಾಗೆ ಈ ಶಬ್ದಗಳನ್ನು ಕೇಳಿ ಹಾಡುಗಾರ ಕಕ್ಕಾವಿಕ್ಕಿಯಾದನು. ಹಿಂದಿರುಗಿ ನೋಡಿದನು; ಯಾರೂ ಕಾಣಲಿಲ್ಲ. ಇದೇನಿರಬಹುದು ಎಂದು ಯೋಚನೆಗೆ ಒಳಗಾದನು. ಅಷ್ಟರಲ್ಲಿ "ಹಃ, ಹಃ, ಹಃ" ಎಂದು ಮೊದಲಿನ ಸ್ಥಳದಿಂದ ನಗುವ ಧ್ವನಿ ಕೇಳಿಸಿತು. ತಿರುಗಿ ನೋಡಿದನು; ಯಾರೂ ಇರಲಿಲ್ಲ. ಹಾಡುಗಾರ ಮತ್ತೆ ಆಲೋಚನೆಯಲ್ಲಿ ಮುಳುಗಿದನು. ಆಗ ಮತ್ತೊಮ್ಮೆ ಅದೇ ನಗೆ ಹೊರ

ಹೊಮ್ಮಿತು; ನಗುವ ಆ ಕೃತಿ ಮಾತ್ರ ಪ್ರಕಟವಾಗಲಿಲ್ಲ. ಹಾಡುಗಾರನು ಮನಸ್ಸಿನಲ್ಲಿ ನಿಶ್ಚಯಮಾಡಿ ಸರಸರನೆ ಮರವನ್ನು ಇಳಿದನು. ಮಾತುಗಳೂ ನಡುಗುವ ಧ್ವನಿಯೂ ಕೇಳಿಸಿದ ಎಡೆಯ ಕಡೆಗೆ ನಡೆದನು.

ಆಜಾನುಬಾಹುವಾದ ಪುರುಷಾಕೃತಿಯೊಂದು ನಿಶ್ಚಲವಾಗಿ ನಿಂತು ಕೊಂಡುದು ಅಲ್ಲಿ ಆತನಿಗೆ ಕಂಗೊಳಿಸಿತು. ಅದರ ಮೈಮೇಲೆ ಅಡಿಯಿಂದ ಮುಡಿವರೆಗೆ ಸೈನಾಧಿಕಾರಿಯ ಘನವಾದ ವೇಷವು ಒಪ್ಪುತ್ತಿದ್ದಿತು. ಅದರ ಬಲಗೈಯಲ್ಲಿ ಹಾಡುಗಾರನ ಕೊಡಲಿ ಎತ್ತಿಹಿಡಿದುದು ಎದ್ದುಕಾಣುತ್ತಿದ್ದಿತು. ಈ ದೃಶ್ಯವನ್ನು ಕಂಡು ಹಾಡುಗಾರನು ಆಶ್ಚರ್ಯಚಕಿತನಾದನು ಆತನ ಬಗೆಯಲ್ಲಿ ವಿಲಕ್ಷಣವಾದ ವಿಚಾರವೊಂದು ಮೂಡಿ ಆತನು ಆ ಆಕೃತಿಗೆ ದಂಡಪ್ರಣಾಮವನ್ನು ಹಾಕಿದನು. ಆತನು ಸಾಷ್ಟಾಂಗವೆರಗಿದಾಗ ಆ ಆಕೃತಿಯ ಮುಖದಿಂದ ಮತ್ತೆ "ಎಲವೋ ಭಕ್ತಾ! ನಿನ್ನ ಭಾವನೆಗೆ ಪ್ರಸನ್ನ ನಾಗಿದ್ದೇನೆ; ಇಷ್ಟವಾದ ವರವನ್ನು ಬೇಡು" ಎಂಬ ಶಬ್ದಗಳೂ "ಹಃ, ಹಃ, ಹಃ," ಎಂಬ ಅದೇ ಆ ನಗೆಯೂ ಹೊರಬಿದ್ದುವು. ಹಾಡುಗಾರನು ಎದ್ದು ನಾಲ್ಕುಹೆಜ್ಜೆ ಹಿಂದಕ್ಕೆ ಸರಿದು ವಿಸ್ಮಯಚಿತ್ತದಿಂದ ಕೈಜೋಡಿಸಿ ನಿಂತುಕೊಂಡನು. ಪುರುಷಾಕೃತಿ ಪರುಷಸ್ವರದಿಂದ ಹಾಡುಗಾರನನ್ನು ಸಂಬೋಧಿಸಿತು:

"ದುರಗಣ್ಣ, ಕನ್ನಡ ಕಲಿಗಳಿಗೆ ನಚ್ಚಿನ ಹಬ್ಬವಾದ ಮಾನೋಮಿ ನಿನ್ನೆಯೆ ಆರಂಭವಾಗಿದೆ. ಈ ಹಬ್ಬದಲ್ಲಿ ನಮ್ಮ ಒಡೆಯರಿಗೆ ವಿರೋಧಿ ಯಾದ ವೈರಿಯನ್ನು ತರಿದುಬಿಸುಡುವ ಸಿದ್ಧತೆ ಮಾಡುವುದನ್ನು ಬಿಟ್ಟು, ನಿನ್ನಂತಹ ಪಳಗಿದ ಯೋಧನು ಈ ಬೆಳಗಿನ ಜಾವದಲ್ಲಿ ಮರ ಕಡಿಯು ವಂತಹ ನಿರ್ಜೀವ ಕೆಲಸಕ್ಕೆ ಮಾರುಹೋಗಬೇಕೆ? ದಳವಾಯಿ ದುರಗಣ್ಣ, ಇದಕ್ಕೂ ಮಹತ್ತರವಾದ ಕಾರ್ಯಗಳು ನಿನ್ನಂತಹ ಸುರಿತ ವೀರನಿಗಾಗಿ ಕಾದುಕೊಂಡಿವೆ. ನಡೆ ನನ್ನ ಸಂಗಡ."

ದುರಗಣ್ಣ ದಿಗಿಲುಗೊಂಡನು ಏನೂ ಮಾತನಾಡದೆ ಏನನ್ನೋ ನೆನೆಯುತ್ತ ಮೌನವಾಗಿ ನಿಂತಲ್ಲಿಯೇ ನಿಂತುಕೊಂಡನು. ಇದನ್ನು

ಲಕ್ಷಿಸಿ ಆತನ ಇದಿರಿನಲ್ಲಿ ನಿಂತಿದ್ದ ಪುರುಷನು ತನ್ನ ಆಡಂಬರದ ಭಂಗಿಯನ್ನು ಬಿಟ್ಟು ಸಭ್ಯರೀತಿಯಲ್ಲಿ ದುರುಗಣ್ಣನನ್ನು ಮಾತನಾಡಿಸಿದನು :

"ಬೆಣ್ಣೆಕಲ್ ತಳವಾರನಾಯಕ ದುರಗಣ್ಣ! ಏಕೆ, ಸುಮ್ಮನೆ ನಿಂತುಕೊಂಡೆ? ನನ್ನಗುರುತು ಸಿಕ್ಕಲಿಲ್ಲವೇ ನಿನಗೆ? ಮಹಾಮಂಡಲೇಶ್ವರರ ಸೇವೆಯಿಂದ ನಿವೃತ್ತನಾಗಿ ಇನ್ನೂ ಪೂರ್ತಿ ಎರಡು ವರ್ಷಗಳೂ ಸಂದಿಲ್ಲ. ಇಷ್ಟರಲ್ಲಿ ಈ ನಿನ್ನ ಬಡ ಒಡನಾಡಿಯನ್ನು ಮರೆತುಬಿಟ್ಟೆಯಾ? ದುರಗಣ್ಣ, ಚೆನ್ನಾಗಿ ನೋಡು" ಎಂದು ಮುಗುಳು ನಗತೊಡಗಿದನು.

ನಿದ್ದೆಯಿಂದ ಎಚ್ಚೆತ್ತವನಂತೆ ದುರಗಣ್ಣ ಮೈಮುರಿದನು. ಮರುಗಳಿಗೆಯಲ್ಲಿ ಮುಂದಕ್ಕೆ ನಡೆದುಬಂದು ಆ ಪುರುಷನಿಗೆ ಪ್ರಣಾಮಮಾಡಿ ನುಡಿದನು : "ಕ್ಷಮಿಸಿ, ನನ್ನನ್ನು, ನಾಯಕರೇ! ಯಾವುದೋ ಗುಂಗಿನಲ್ಲಿ ಇದ್ದೆನು. ಹೀಗೆ ಭ್ರಮಿಷ್ಟನಂತೆ ನಿಮ್ಮೊಡನೆ ವರ್ತಿಸಿದುದಕ್ಕಾಗಿ ನನ್ನನ್ನು ಕ್ಷಮಿಸಿ, ನಾಯಕರೇ ಸಿಂದ ಮಂಡಲದ ಆಧಾರಪ್ರಾಯವಾಗಿರುವ ಪಡೆವಳ ಏಚಿಮಯ್ಯ ನಾಯಕರನ್ನು ಅರಿತು ಮರೆಯುವಂತಹ ಮನುಷ್ಯನಾರು? ಇದ್ದಕ್ಕಿದ್ದ ಹಾಗೆ ಈ ಮುಂಜಾವದಲ್ಲಿ ಈ ಅಡವಿಗೆ ಏಕಾಕಿಯಾಗಿ ತಾವು ದಯಮಾಡಿಸಿದ ಕಾರಣ ತಿಳಿಯಲಿಲ್ಲವಲ್ಲ!"

"ನಾನು ಏಕಾಕಿಯಾಗಿಲ್ಲ, ದುರಗಣ್ಣ, ಅಕೊ! ಅಲ್ಲಿ ಆ ಮರದ ಕೆಳಗೆ ನನ್ನ ಚಿರಸಹಚರ ವಾಜಿರಾಜ ವೈನತೇಯ ಮೇಯುತಲಿದಾನೆ. ಇಕೊ! ಇಲ್ಲಿ ಈ ನನ್ನ ಮೈಮೇಲೆ ನಖಶಿಖಾಂತ ಧರಿಸಿದ ಆಯುಧಗಳು. ಇದಲ್ಲವೆ ಕ್ಷತ್ರಿಯನ ನಿತ್ಯ ಬಳಗ? ನಿನ್ನೂರ ಈ ಅಡವಿಯಲ್ಲಿ ನಾನೀಗ ಹೇಗೆ ಬಂದೆನು ಎಂಬ ವಿಷಯ ಆಮೇಲೆ ತಿಳುಹುವೆ. ಅದಕ್ಕೂ ಮೊದಲು ಒಂದು ಕುತೂಹಲ. ಇದೀಗ ನೀನು ಹಾಡುತ್ತಿದ್ದೆಯಲ್ಲ ಮೈಮರೆತು—ದೇವಿಯ ಹಾಡು. ಅದು ಎಷ್ಟು ಸೊಗಸಾಗಿದೆ! ಎಲ್ಲಿ ಕಲಿತೆಯಯ್ಯ ಅದನ್ನು?"

"ಏಚಣ್ಣನವರೇ, ದಯವಿಟ್ಟು ಬಡವನನ್ನು ಹಾಸ್ಯಮಾಡಬೇಡಿ. ನಾನೇನು ಹಾಡುಗಾರನೆ? ತಂಬೂರೀ, ತಾಳ ಹಿಡಿದು ಸಂಗೀತ ಕಲಿತವನೆ?

ಬರಿಯ ಕಲಿ ಬಂಟ. ಯಾರೂ ಇಲ್ಲದ ಈ ಕಾಡಿನಲ್ಲಿ ಏನೋ ಹುಚ್ಚನಂತೆ ಕಿರಚುತ್ತಿದ್ದೆ—''

" ಹಾಗಲ್ಲ ದುರಗಣ್ಣ ; ನಿಜವಾಗಿ ; ನಾನು ಚೇಷ್ಟೆ ಮಾಡುತ್ತ ಇಲ್ಲ. ನೀನು ಹಾಡಿದುದು ದೇವಿಯ ಹಾಡು, ನಮ್ಮ ನಾಡ ದೇವಿಯ ಹಾಡು, ನಮ್ಮ ಮಂಡಲೇಶ್ವರರ ಕುಲದೇವಿಯ ಹಾಡು, ಕುಕ್ಕನೂರ ಶ್ರೀಮಹಾ ಮಾಯೆಯ ಹಾಡು, ನಿನ್ನೆಯಿಂದ ಆಕೆಯ ನವರಾತ್ರ ಉತ್ಸವ ಆರಂಭ ವಾಗಿದೆ. ನಿನ್ನ ಆ ಹಾಡು ನನ್ನನ್ನೂ ಭಕ್ತಿಪರವಶ ಮಾಡಿತು. ಎಷ್ಟು ಸರಳ, ಎಷ್ಟು ಮಧುರ ! ಅದಕ್ಕಾಗಿ ಕೇಳಿದೆನು.''

" ನಾಯಕರೇ, ಕೇಳಿ, ದೊರೆಗಳ ಅಪ್ಪಣೆ ಪಡೆದುಕೊಂಡ ಬಳಿಕ ನಾನು ಯಲಂಬರಗಿಯನ್ನು ಬಿಟ್ಟು ನನ್ನ ಪಿತ್ರಾರ್ಜಿತ ಊರಾದ ಈ ಬೆಣ್ಣೆ ಕಲ್ಲಿಗೆ ಬಂದು ಹಾಯಾಗಿ ಇದ್ದು ಬಿಟ್ಟಿದ್ದೇನೆ. ಆಗಾಗ ಅಡವಿಗೆ ಹೋಗಿ ಬೇಟೆಯಾಡುತ್ತ, ಮನಸು ಬಂದಾಗ ಕೊಡಲಿ ರಾಮನಾಗಿ ಸೌದೆ ಕಡಿ ಯುತ್ತ ಕಾಲ ಕಳೆಯುವೆನು. ಈ ಕೊಡಲಿ ಕೈಯಲ್ಲಿ ಇದ್ದಾಗ ಒಮ್ಮೊಮ್ಮೆ ಹರೆಯದ ಕಾವೇರಿ ಹಿಂದೆ ಕಾಳೆಗಕಣದಲ್ಲಿ ನಾನು ಆಡಿದ ಆಟಗಳು ನೆನಪಿಗೆ ಬಂದು ಮೈ ಜುಮ್ ಎನ್ನುವುದು. ಆಗಾಗ ನಾನು ಹೇಳುವ ಕಾರ್ಯದ ಕತೆಗಳನ್ನು ಕೇಳಲು ನಮ್ಮೂರ ತರುಣರ ತಂಡ ಯಾವಾಗಲೂ ನನ್ನ ಸುತ್ತು ಸುಳಿದಾಡುವುದು. ಈ ಹರೆಯದ ಹುಡುಗರ ಹುರುಪು ಹೆಚ್ಚಿನದು. ಇವರಿಗೆ ದೇವಿಯಲ್ಲಿ ಭಕ್ತಿ ಬಹಳ. ಹಗಲೆಲ್ಲಾ ದೇವಿಯು ದುಷ್ಟ ಸಂಹಾರದ ಚರಿತೆ ಗಳೂ ಬಿಲ್ಲು ಕತ್ತಿಯ ಮಾತುಗಳೇ ಮಾತು ಅವರಿಗೆ ಇಂತಹರಲ್ಲಿ ನನ್ನ ಅಣ್ಣ ರಾಯಣ್ಣನ ಮಗ ಬಬ್ರು ; ಅವರಿಗೆ ಮುಂದಾಳು.''

" ಏನು-ಬಬ್ರು ? ಇದೆಂತಹ ಹೆಸರೋ ದುರಗಣ್ಣ ?''

" ಬಬ್ರು ಎಂದರೆ ಬಭ್ರುವಾಹನ. ಇದು ಅತನ ತೊಟ್ಟಿಲ ಹೆಸರಲ್ಲ. ತೊಟ್ಟ ಹೆಸರು. ಅವನ ಹುಟ್ಟು ಹೆಸರು ನಿಂಗಣ್ಣ. ತಿಳಿವಳಿಕೆ ತೆರೆದಾಗಿ ನಿಂದ ಇವನಿಗೆ ಯಕ್ಷಗಾನದ ಹುಚ್ಚು ಬಹಳ. ಬಭ್ರುವಾಹನ ಆಟವೆಂದರೆ ಮೈಯುಬ್ಬಿ ಕುಣಿಯುತ್ತಿದ್ದನು. ಬಭ್ರುವಾಹನನ ವೇಷ ಹಾಕಿ ಪಾರ್ಥನ

ಕೂಡ ಹೋರಾಡುವಂತೆ ಮತ್ತೆ ಮತ್ತೆ ಅಭಿನಯಿಸುವನು. ಆದಕ್ಕಾಗಿ 'ಬಬ್ರು' ಎಂದು ಅವನನ್ನ ಎಲ್ಲರು ಕರೆಯ ತೊಡಗಿದರು.

" ಸರಿ ಸರಿ, ಮುಂದೆ."

" ಕತ್ತಿಯ ಕಾಯಕವಲ್ಲದೆ ಕವಿತ್ವದ ಯಮಕವನ್ನೂ ಎಲ್ಲಿಂದಲೋ ಕಲಿತು ಕೊಂಡಿದ್ದಾನೆ ಈ ತುಂಟ ಇದುವರೆಗೆ ಎಷ್ಟೋ ಹಾಡುಗಳನ್ನು ಕಟ್ಟಿದ್ದಾನಂತೆ. ತನ್ನ ಸಂಗಡಿಗರ ಮುಂದೆ ಗಮಕದಿಂದ ಹಾಡಿದ್ದಾನಂತೆ. ಈ ಸಂಗತಿ ನನಗೆ ತಿಳಿದೇ ಇರಲಿಲ್ಲ. ನಿನ್ನೆಯ ದಿನ ಫಕ್ಕನೆ ಅದು ಹೊರ ಬಿದ್ದಿತು"

" ಅದು ಹೇಗೆ ?"

" ದೇವಿಯ ಉತ್ಸವ ನೋಡಲು ನಾವೆಲ್ಲರೂ ಕುಕ್ಕನೂರಿಗೆ ಹೋಗಿದ್ದೆವು' ನಿನ್ನೆಯ ದಿನ—ನವರಾತ್ರಿಯ ಮೊದಲು ದಿನ. ದೇವಿ ಪಲ್ಲಕ್ಕಿಯಲ್ಲಿ ಬಂದು ಕುಳಿತಳು-ನಾವು ಪರಸೆಯಲ್ಲಿ ಎಲ್ಲಿಯೋ ದೂರ ನಿಂತುಕೊಂಡಿದ್ದೆವು. ಇದ್ದಕ್ಕಿದ್ದ ಹಾಗೆ ದೇವಿಯ ಮುಂದೆ ಗಂಟೆ ನುಡಿದಂತೆ ಯಾರೋ ಹಾಡುವ ದನಿ ಕೇಳಿಸಿತು. ಕುತೂಹಲದಿಂದ ಬಂದು ನೋಡುತ್ತೇವೆ. ನಮ್ಮ ಬಬ್ರು ! ಎಲಾ ಕಳ್ಳ, ಅವನ ಹಾಡು ಬಹು ಜನರ ಮನಸ್ಸಿಗೆ ಮೆಚ್ಚಾಯಿತು. ನನ್ನ ಎದೆಗೂ ತಾಗಿ ಹಿಡಿಯಿತು. ಹಾಗೆ ಹಿಡಿವದ್ದು ಈ ಬೆಳಗಿನಲ್ಲಿ ಹೀಗೆ ಸಿಡಿದು ಬಂದಿತು."

"ಮರಗಣ್ಣ, ನಿಮ್ಮ ಮನೆತನವೇ ಅಂತಹುದು. ದೈವಭಕ್ತಿ ಮತ್ತು ಸ್ವಾಮಿನಿಷ್ಠೆಗಾಗಿ ಹರಕೆಹೊತ್ತು ಹುಟ್ಟಿದವರು ನೀವು. ಮಹಾಮಂಡಲೇಶ್ವರನನ್ನು ನೀನು ಪರಿಪರಿಯಿಂದ ಸೇವಿಸಿರುವೆ. ಮಹಾಮಂಡಲೇಶ್ವರರ ಸೇವೆಯಿಂದ ನಿವೃತ್ತನಾದರೂ ಮಹಾಮಂಡಲೇಶ್ವರರ ಮನಸ್ಸಿನಿಂದ ಮರೆಯಾಗಿಲ್ಲ ನೀನು. ಅನೇಕ ಸಂದರ್ಭಗಳಲ್ಲಿ ಪ್ರಭುಗಳು ನಿನ್ನನ್ನು ಈಗಲೂ ಸ್ಮರಿಸುತ್ತಲೇ ಇರುವರು."

"ಆ ಮಹಾರಾಜರ ಕೃಪಾಕಟಾಕ್ಷಕ್ಕೆ ಪಾತ್ರರಾದ ತಮ್ಮಂತಹ ಬಲ್ಲಾಳುಗಳು ನೂರು ನೂರು ಜನ ಬಾಳಿರಲು, ಒಡೆಯರು ಈ ಬಡಪಾಯಿಯನ್ನು ನೆನೆಯುವಂತಹದು ಏನಿದೆ ನನ್ನಲ್ಲಿ ?"

"ದುರಗಣ್ಣ, ಮಹಾಮಂಡಲೇಶ್ವರರಿಗೆ ನೀನು ಸಲ್ಲಿಸಿದ ಸೇವೆ ಅಷ್ಟಿಷ್ಟಲ್ಲ . . ಒಳಕಾಪಿನ ಭಟರ ನಾಯಕನಾಗಿ ಇದ್ದುಕೊಂಡು ಹಲವು ಪ್ರಸಂಗಗಳಲ್ಲಿ ಪ್ರಭುಗಳನ್ನು ಕಾಪಾಡಿದೆ. ಈ ನಿನ್ನ ಸೇವೆಗಳಿಂದ ಸಂತುಷ್ಟರಾದ ಸ್ವಾಮಿಯವರು ತಳವಾರ ನಾಯಕನಾದ ನಿನ್ನನ್ನು ಬಹುವಾಗಿ ಗೌರವಿಸಿ 'ದಳವಾಯಿ' ಎಂಬ ಪದವಿಯನ್ನು ನಿನಗೆ ದಯಪಾಲಿಸಿದರು. ದುರಗಣ್ಣ, ನಿನ್ನಂತಹ ನಿಸ್ಸೀಮ ಸೇವಕರು ಇದ್ದರೆ ತಾನೆ ಪ್ರಭುಗಳು ಪ್ರಭುಗಳಾಗುವುದು ?"

"ಅದೆಲ್ಲ ಗತಗೋಷ್ಠಿ, ನಾಯಕರೇ. ತಪ್ಪೋ ಒಪ್ಪೋ, ಹೇಗೋ ಸ್ವಾಮಿಯ ಪಾದಸೇವೆಯಲ್ಲಿ ಮುಪ್ಪಾಯಿತು ಈ ದೇಹ. ಇದೀಗ ಈ ಇಳಿವಯಸ್ಸಿನ ದಿನಗಳನ್ನು ವಿಶ್ರಾಂತಿ ಸುಖದಲ್ಲಿ ಕಳೆಯುತ್ತಿದ್ದೇನೆ. ಇದೂ ಒಂದು ಆ ಸ್ವಾಮಿಯ ಅನುಗ್ರಹವೇ."

"ಗತಗೋಷ್ಠಿಯಲ್ಲ, ದುರಗಣ್ಣ. ವರ್ತಮಾನ ಘಟನೆ ಆಗಬೇಕಾಗಿದೆ ಅದು ಮತ್ತೆ. ಇದೀಗ ದೇಶದಲ್ಲಿ ನಡೆಯುತ್ತಿರುವ ವಿಷಯಗಳು ನಿನ್ನ ಕಿವಿವರೆಗೆ ಬಂದು ತಾಗಿಲ್ಲವೆ, ದಳವಾಯಿ ? ರಾಜನೀತಿ ಗಹನವಾದುದು. ಕೆಲ ಕಾಲದಿಂದ ಮೆದುವಾಗಿ ಬೀಸಿದ ಗಾಳಿ ಬೇಗನೆ ಬಿರುಗಾಳಿ ಆಗಲಿದೆ. ಹೆಮ್ಮರಗಳನ್ನು ಉರುಳಿಸಲು ಹವಣಿಸುತ್ತಲಿದೆ. ಮಹಾಗಿರಿಯನ್ನು ನಡುಗಿಸಲು ಹೊಂಚು ಹಾಕಿದೆ. ಶಾಂತಿಯ ನೆಲೆ, ಸೌಖ್ಯದ ಬೀಡು, ಧರ್ಮದ ತವರು ಆದ ಕುಂತಲ ರಾಷ್ಟ್ರದಲ್ಲಿ ಅಶಾಂತಿಯನ್ನು ಕೆರಳಿಸುವ ಉದ್ಯೋಗಕ್ಕೆ ಕೆಲ ದುರ್ಮಾಗಿಗಳು ಕೈಹಾಕಿದ್ದಾರೆ. ಇಂತಹರ ಹುಟ್ಟನ್ನು ಅಡಗಿಸಲು ನಿನ್ನಂತಹ ಪ್ರಭುನಿಷ್ಠರು ಸಹಾಯವಾಗಬೇಡವೇ, ದುರಗಣ್ಣ?

"ಶಿವಶಿವಾ ಎನ್ನುತ್ತ ನಿವೃತ್ತಿಯಲ್ಲಿ ಕಾಲಕ್ಷೇಪ ಮಾಡುತ್ತಿದ್ದ ನನಗೆ ನಿಮ್ಮ ಮಾತುಗಳ ಅಭಿಪ್ರಾಯ ಸರಿಯಾಗಿ ಆಗಲಿಲ್ಲ. ಕಾಳೆಗದ ಕಹಳೆ ಕೇಳಲಿದೆ. ನಾಡಿನಲ್ಲಿ ಗಲಭೆ ಏಳಲಿದೆ ಮುಂತಾಗಿ ಜನಗಳು ಸೂಕ್ಷ್ಮವಾಗಿ ಅಲ್ಲಲ್ಲಿ ಆಡಿಕೊಳ್ಳುತ್ತಿರುವುದನ್ನು ಲಕ್ಷಿಸಿದ್ದೇನೆ. ಆ ಊರ ಈ ಊರ ಹರೆಯದ ಹುಡುಗರು ದಂಡಿನಲ್ಲಿ ಸೇರಲು ಹೊರಟುಹೋದರು, ಮುಂತಾದ ಸುದ್ದಿಗಳು ನನ್ನ ಕಿವಿಗೂ ಬಿದ್ದಿವೆ. ಆದರೆ ಇದೇನು ಗೊಂದಲ, ಈ ದಂಡಿನ

ಏರ್ಪಾಟು ಏತಕ್ಕೆ ಎಂಬುದು ಮಾತ್ರ ನನಗೆ ಇನ್ನೂ ಚೆನ್ನಾಗಿ ಅರ್ಥವಾಗಿಲ್ಲ. ರಾಜಧಾನಿಯಿಂದ ದೂರ ಇದ್ದುದರಿಂದಲೂ ರಾಜಕೀಯ ಜನರ ಸಂಬಂಧ ತಪ್ಪಿದುದರಿಂದಲೂ ನನಗೆ ಈ ವಿಷಯಗಳ ರಹಸ್ಯ ಹೊಳೆದಿಲ್ಲ.''

''ಅದಕ್ಕಾಗಿಯೆ ನಾನು ಹೇಳುತ್ತೇನೆ; ದುರಗಣ್ಣ, ನೀನು ರಾಜಧಾನಿಗೆ ನಡೆ ಎಂದು.''

''ಅಲ್ಲಿಗೆ ಬಂದು ಏನು ಮಾಡುವುದು, ನಾಯಕರೆ? ಈ ವಯಸ್ಸಿನಲ್ಲಿ ಆ ವಯಸ್ಸಿನ ಹುಮ್ಮಸ ಬಂದೀತೇ? ನಿಮ್ಮಂತಹ ತರುಣರು, ಸಮರ್ಥರು ಬೇಕಾದಷ್ಟು ಜನ ಇರುವಾಗ ಮತ್ತೆ ನನ್ನನ್ನು ಎಳೆಯುವುದೇಕೆ?''

''ದುರಗಣ್ಣ, ಹುಣಸೆ ಮುಪ್ಪಾದರೆ ಹುಳಿ ಮುಪ್ಪೆ? ನಿನ್ನಂತಹ ಪಳಗಿದ ಬಂಟನೊಬ್ಬನು ನೂರು ನೂರು ಹರೆಯದ ತುಂಟರಿಗಿಂತ ಮೇಲು. ನೀನೇ ಹೇಳಲಿಲ್ಲವೇ ಇದೀಗ? ನಿನ್ನ ಊರ ಹುಡುಗರೆಲ್ಲ ನಿನ್ನ ಸುತ್ತ ತಿರುಗುವರೆಂದು. ದಳವಾಯಿ ದುರಗಣ್ಣನ ಕಲಿತನದ ಕತೆಗಳು ಈ ನಾಡಿನ ಮನೆ ಮನೆಗೆ ಮನೆವಾರ್ತೆ ಆಗಿರುವುವು. ನಿನ್ನ ಒಂದು ಹೆಸರು ಹತ್ತು ಊರ ಹರೆಯದ ಹುಡುಗರನ್ನು ಹುರಿದುಂಬಿಸಬಲ್ಲುದು. ನಿನ್ನ ಒಂದು ನೋಟ ಸಾವಿರ ಸೈನಿಕರಲ್ಲಿ ವೀರಶ್ರೀಯನ್ನು ಚಿಮ್ಮಿಸಬಲ್ಲದು. ದುರಗಣ್ಣನ ಧ್ವನಿ ನಮ್ಮ ದಂಡಿಗೊಂದು ದುಂದುಭಿಘೋಷ. ಇದುವರೆಗೆ ಹೇಳಲಿಲ್ಲ ಈಗ ಸ್ಪಷ್ಟವಾಗಿ ಹೇಳುತ್ತೇನೆ ಕೇಳು, ದುರಗಣ್ಣ. ನಿನ್ನ ಸೇವೆಯನ್ನು ಮಹಾಮಂಡಲೇಶ್ವರರು ಮತ್ತೆ ಬಯಸಿರುವರು. ನಿನ್ನನ್ನು ಕರೆತರಲು ನನಗೆ ಆಜ್ಞಾಪಿಸಿರುವರು. ಹೊತ್ತು ಏರುತ್ತಲಿದೆ; ಹೊರಡುವೆ ದುರಗಣ್ಣ. ಇದೀಗ ನಾನು ಹೊರಟದ್ದು ಬೇರೆ ಕೆಲಸಕ್ಕೆ. ಆದರೆ ದಾರಿಯಲ್ಲಿ ಈ ಕೆಲಸವನ್ನು ಮಾಡೆಂದು ಮಂಡಲೇಶ್ವರರು ಗುರುತಿಟ್ಟು ವಿಧಿಸಿದುದರಿಂದ ನಿನ್ನನ್ನು ಹೀಗೆ ಕೆಣಕಿದುದು. ಮನ್ನಿಸು.''

''ದೇವಿಯ ಚಿತ್ತ. ಪ್ರಭುಗಳ ಆಜ್ಞೆಯನ್ನು ತಲೆಯಮೇಲೆ ಇಟ್ಟುಕೊಳ್ಳುವೆನು. ಈ ಹೊತ್ತೇ ಸಂಜೆಯ ಒಳಗಾಗಿ ರಾಜಧಾನಿಗೆ ಹೊರಡುವೆ. ಆದರೆ ನಾಯಕರೆ, ಮುಂದೆ ಪಯಣ ಬಹಳ ಇದ್ದಂತೆ ತೋರುತ್ತದೆ· ದಯ

ಬಿಟ್ಟು ಸ್ವಲ್ಪ ಊರವರೆಗೆ ಬಂದು ಬಡವನ ಮನೆಯಲ್ಲಿ ಗಂಜಿ ಕುಡಿದು ಹೋದರೆ ಬಡವನಮೇಲೆ ಬಹಳ ಉಪಕಾರವಾಗುತ್ತದೆ.''

''ಕ್ಷಮಿಸು ದುರಗಣ್ಣ, ಇನ್ನೊಮ್ಮೆ ಬರುವೆ. ಈಗ ಸಮಯವಿಲ್ಲ. ನಿನಗೆ ಹೇಳಲಾರದಂತಹದು ಯಾವುದು? ಬೆಳಗಿನಲ್ಲಿ ರಾಜಧಾನಿಯಿಂದ ಹೊರಟಾಗ ಇನ್ನೂ ಎರಡು ಗಳಿಗೆ ರಾತ್ರಿ ಇತ್ತು. ಅಲ್ಲಿಂದ ಕುಕ್ಕನೂರಿಗೆ ಬಂದೆನು. ಅಲ್ಲಿ ಸ್ವಲ್ಪ ಕೆಲಸ – ಅದನ್ನು ತೀರಿಸಿ ಕೊಪಣಕ್ಕೆ ಹೊರಟಿರುವೆ. ದಾರಿಯಲ್ಲಿ ಈ ಬೆಣ್ಣೆಕಲ್ ಅಡವಿಯಲ್ಲಿ ಅನಾಯಾಸವಾಗಿ ನಿನ್ನ ದರ್ಶನ ವಾಗಿ ಇನ್ನೊಂದು ಕೆಲಸ ಸಾಧಿಸಿತು. ಕೊಪಣದಲ್ಲಿ ಮಹತ್ತರ ಕಾರ್ಯ ವಿದೆ. ಕುಪ್ಪದೇವ ದಣಾಯಕನ ಕೈಕೆಳಗೆ ಆ ಭಾಗದ ಒಂದು ದೊಡ್ಡ ಪಡೆ ಕೂಡುತ್ತಲಿದೆ. ಆ ವಿಚಾರದಲ್ಲಿ ಆತನಿಗೆ ಕೆಲ ವಿಷಯಗಳನ್ನು ಅರುಹಲು ಮಹಾಮಂಡಲೇಶ್ವರರ ಆಜ್ಞೆಯಿದೆ. ಕೊಪಣದ ಕಾರ್ಯವನ್ನು ಮುಗಿಸಿ ಎಷ್ಟು ಹೊತ್ತಾದರೂ ಈ ಹೊತ್ತೇ ಮರಳಿ ರಾಜಧಾನಿಯನ್ನು ಕಾಣ ಬೇಕಾಗಿದೆ.''

''ಏನು ಇಂದೇ ತಿರುಗಿ ಯಲಂಬರಗಿಗೆ ತಿರುಗಬೇಕೆ?''

''ಅಹುದು, ಸ್ವಲ್ಪ ದಿನಗಳಲ್ಲಿ ಬಹಳ ಕಾರ್ಯಗಳು ನಡೆಯಬೇಕಾದು ದರಿಂದ ಒಂದೊಂದು ದಿನವೂ ಘನವಾಗಿದೆ. ಕ್ಷಣದ ವಿರಾಮವಿಲ್ಲ ನಮಗೆ. ವಿಜಯದಶಮಿ ಎಂಬಷ್ಟರಲ್ಲಿ - ಸೇನೆಯ ಸಕಲ ಸನ್ನಾಹಗಳು ಅಳವಡ ಬೇಕಾಗಿದೆ.''

''ಅರ್ಧಕ್ಕಿಂತ ಹೆಚ್ಚು ದಾರಿ ಬಂದಿದ್ದೀರಿ. ಯಲಂಬರಗಿಯಿಂದ ಕುಕ್ಕನೂರು ಮೂರು; ಅಲ್ಲಿಂದ ನಮ್ಮದು ಒಂದುವರೆ; ಆ ಕಡೆ ಕೊಪಣ ಮತ್ತೆ ಸುಮಾರು ಮೂರು ಹರದಾರಿ. ಇನ್ನು ಬೇಗ ಹೊರಡುವುದೇ ಉತ್ತಮ.''

''ಮೂರು ಹರದಾರಿ ಏನು ಮಹಾ? ಹಾಂ ಹಾಂ ಎನ್ನುವಷ್ಟರಲ್ಲಿ ಹಾರಿ ಹೋಗುವದು ನಮ್ಮ ವಾಜಿ ವೈನತೇಯ.''

---

## ಕಿರಣ ಎರಡು

# ರಾಜಗುರು

ಇಂದು ವಿಜಯದಶಮಿ. ಸೃಷ್ಟಿಯೇ ಉಲ್ಲಾಸದಿಂದ ಉದಯವಾಗುತಲಿದೆ. ಇದುವರೆಗೆ ಆಕ್ರಮಿಸಿಕೊಂಡಿದ್ದ ಕತ್ತಲೆಯ ಆಪತ್ತಿಯಿಂದ ಇದೀಗ ಅದಕ್ಕೆ ಬಿಡುಗಡೆ. ನಿಶೆಯ ಆಶ್ರಯದಿಂದ ಮದಿಸಿದ ಮಂಡಲೇಶ್ವರರು ಕೆಲರು ದಿವಾಕರ ಚಕ್ರವರ್ತಿಯ ಆಧಿಪತ್ಯವನ್ನು ಅಂಗೀಕರಿಸದೆ ದಂಗೆಯನ್ನು ಎಬ್ಬಿಸಿದರು. ಅವರ ಕೊಬ್ಬನ್ನು ಕರಗಿಸಲು ಆ ಪ್ರಭಾಕರನು ಶೀತರಶ್ಮಿ ಎಂಬ ತನ್ನ ಸಾಮಂತನನ್ನು ಕಳುಹಿದನು. ಆದರೆ ಅತಿ ಸೌಮ್ಯತೆಯ ಮೂಲಕ ಆತನ ಕಾರ್ಯಭಾರವು ಕೈಗೂಡಲಿಲ್ಲ. ಇದನ್ನು ಕಂಡು ಕಿಡಿಕಿಡಿಯಾದ ಭಾಸ್ಕರನು ಆ ದ್ರೋಹಿಗಳ ಪಾರುಪತ್ಯ ಮಾಡಲು ತಾನೇ ಸಿದ್ಧನಾದನು. ಆ ರಕ್ತಮುಖ ಅರುಣ ಕುಮಾರನು ಆದಿತ್ಯದೇವನ ದೂತನಾಗಿ ಮುಂದೆ ಬಂದನು. ಆತನ ವಿಜಯ ಮಾತೆಯ ವೃತಾಂತವನ್ನು ನೆಲಮುಗಿಲ ತೆರೆಯ ಮೇಲೆ ಚಿತ್ರಿಸ ತೊಡಗಿದನು. ಹತ್ತು ದಿಕ್ಕಿನ ಬೀದಿಗಳಲ್ಲಿ ಹರಿದ ಈ ಕೆನ್ನೀರ ಕಾಲುವೆಎಂತಹುದು? ರವಿಕಿರಣ ಎಂಬ ಸೂರ್ಯನ ಸೈನಿಕರು ಇರುಳಿನ ಸಂಚುಗಾರರನ್ನು ಬೆನ್ನಟ್ಟಿ ಅಲ್ಲಲ್ಲಿ ತುಂಡರಿಸಲು ಸೂರೆಗೊಂಡ ನೆತ್ತರೋಕಳಿಯಲ್ಲದೆ ಮತ್ತೇನು? ಸವಿತಾರನ ಶುಭಾಗಮನವನ್ನು ಸ್ವಾಗತಿಸಲು ಉಷಾರಮಣಿ ಮಂಗಲ ಗೀತಗಳನ್ನು ಹಾಡುತ್ತ ಮಂದಹಾಸ ಸೂಸಿದವು. ಲೋಕಗಳು ಬೆಳಗಿದುವು. ಜ್ಯೋತಿಯೊಡೆಯನ ಜೈತ್ರ ಸಂಚಾರ ಜಯಶೀಲವಾಯಿತು. ಆತನ ಆ ದಿಗ್ವಿಜಯವನ್ನು ಉದ್ಘೋಷಿಸಲು ದುಂದುಭಿಗಳು ಮೊಳಗಿದುವು!

ಕೇಳಿ, ಕೇಳಿ. ಈ ಮಂಗಲ ಸ್ವರವೂ ಭೇರೀ ನಿನಾದವೂ ಎಲ್ಲಿಂದ ಬರುತ್ತಲಿವೆ? ದೇವಿಯ ದೇವಾಲಯದಿಂದ ಅಲ್ಲವೆ? ಈ ಶಬ್ದವನ್ನು ಆಲಿಸುತ್ತ ರಾಜಠೀವಿಯ ವೀರನೊಬ್ಬನು ಆ ದೇವಾಲಯದ ಭವ್ಯವಾದ ಮಹಾದ್ವಾರಕ್ಕೆ ಬಂದು ಬೆಟ್ಟದಂತಹ ಕುದುರೆಯ ಮೇಲಿಂದ ಸರ್ರನೆ ಕೆಳಗೆ ಇಳಿದನು. ಕೂಡಲೆ ಅತನ ಹಿಂಬದಿಯಿಂದ ಸೇವಕನೊಬ್ಬನು ಮುಂದೆ ಸರಿದು ಕುದುರೆಯ ಕಡಿವಾಣವನ್ನು ಹಿಡಿದುಕೊಂಡು ಒಂದು ಪಕ್ಕಕ್ಕೆ

ನಡೆದು ಹೋದನು. ವೀರನು ಇನ್ನೊಬ್ಬ ಸೇವಕನ ನೆರೆಯಲ್ಲಿ ಒಳಗೆ ಪ್ರವೇಶಿಸಿದನು. ದೇವಿಗೆ ಸಾಷ್ಟಾಂಗವೆರಗಿ ಮೂರು ಸಲ ಬಲವಂದು ಧ್ಯಾನಸ್ಥನಾಗಿ ಕಣ್ಣು ಮುಚ್ಚಿ ನಿಂತುಕೊಂಡನು. ಕೆಲ ನಿಮಿಷಗಳಾದ ಬಳಿಕ ಕಣ್ದೆರೆದು ನೋಡುವಷ್ಟರಲ್ಲಿ ಜಟಾಧಾರಿ ತೇಜಸ್ವಿ ತಾಪಸನೊಬ್ಬನು ಆತನ ಬಳಿ ನಿಂತಿದ್ದನು.

"ಮಹಾಮಂಡಲೇಶ್ವರರಿಗೆ ವಂದನೆಗಳು. ಏನು ಇಷ್ಟು ನಸುಕಿನಲ್ಲಿ ದೇವಿಯ ದರ್ಶನಕ್ಕೆ ಬಂದುದಾಯಿತು!"

"ಆಚಾರ್ಯರಿಗೆ ಪ್ರಣಾಮಗಳು. ದೇವಿಯಂತೂ ಸರಿಯೆ ದೇವಿಯ ವರಪುತ್ರರ ಸಂದರ್ಶನಕ್ಕೂ, ಗುರುರಾಜರೆಲ್ಲಿ ?"

"ಗರ್ಭಗೃಹದ ಪಕ್ಕದ ಗುಹೆಯಲ್ಲಿ, ಪ್ರಾತರಾಹ್ನಿಕವನ್ನು ಮುಗಿಸಿ ಧ್ಯಾನಮಗ್ನರಾಗಿರುವರು."

"ಅಂದರೆ ಸಂದರ್ಶನಕ್ಕೆ ಈಗ ಅವಕಾಶವಿಲ್ಲವೆ?"

"ಇದೆ, ಧಾರಾಳವಾಗಿ."

"ಸಮಾಧಿಗೆ ಭಂಗ ತಂದಂತಾಗುವುದಿಲ್ಲವೆ?"

"ಇಲ್ಲ, ಗುರು-ಶಿಷ್ಯರಲ್ಲಿ ಅನ್ಯ ಅಭ್ಯಂತರವಿದೆಯೆ? ಆಪ್ತ ಶಿಷ್ಯನ ಯೋಗಕ್ಷೇಮ ಚಿಂತೆ ಗುರುಗಳು ಚಿಂತಿಸತಕ್ಕ ವಿಷಯಗಳಲ್ಲಿ ಒಂದು."

"ಹಾಗಾದರೆ ಒಡನೆ ಅತ್ತ ಹೋಗಬಹುದಷ್ಟೆ?"

"ನಡೆಯಿರಿ, ಹೋಗುವ. ಅದುವರೆಗೆ ಈ ಸೇವಕನು ಇಲ್ಲಿಯೇ ಉಳಿದುಕೊಳ್ಳಲಿ."

"ಹಾಗೆಯೆ ಆಗಲಿ."

ಭಾನುಶಕ್ತಿ ಆಚಾರ್ಯರು ಆ ವೀರನನ್ನು ಕರೆದುಕೊಂಡು ಒಳಗೆ ಹೊರಟರು. ಸಭಾಮಂಟಪವನ್ನೂ ಮಧ್ಯರಂಗವನ್ನೂ ದಾಟಿ ಗರ್ಭಗೃಹವನ್ನು ಸಮೀಪಿಸಿದರು. ಅಲ್ಲಿಂದ ಮೆಲ್ಲನೆ ಗರ್ಭಗುಡಿಯೊಳಗೆ ಹೋಗಿ ಹತ್ತಿಸಿದ ಕಕ್ಕಡವನ್ನು ಕೈಯಲ್ಲಿ ಹಿಡಿದುಕೊಂಡು ಬಂದರು. ಮುಂದೆ ಮೆಲ್ಲ ಮೆಲ್ಲನೆ ಹೆಜ್ಜೆಯಿಕ್ಕುತ್ತ ಗರ್ಭಗೃಹದ ಬಲದ ಎರಡು ಚಿಕ್ಕ ಮಂಟಪಗಳನ್ನು

ದಾಟಿ ಗವಿಯೊಂದರ ಕಿರುಬಾಗಿಲಿಗೆ ತಲುಪಿದರು. ಅಲ್ಲಿ ವೀರನಿಗೆ ನಸು ನಿಲ್ಲ ಹೇಳಿ ಗವಿಯ ಕದವನ್ನು ಮೆತ್ತಗೆ ಸರಿಸಿ ಒಳಗೆ ಪೊಕ್ಕರು. ಬೇಗನೆ ಮರಳಿ ಬಂದು 'ಒಳಗೆ ಹೋಗಬಹುದು' ಎಂಬುದಾಗಿ ವೀರನಿಗೆ ಸನ್ನೆ ಮಾಡಿದರು. ವೀರನು ಉಲುಕಾಡದಂತೆ ಬಲು ಜೋಕೆಯಿಂದ ಬಗ್ಗಿ ಒಳಗೆ ಹೊರಟನು. ಅವನು ಒಳಗೆ ಹೋದ ಬಳಿಕ ಭಾನುಶಕ್ತಿಗಳು ಗವಿಯ ಕದವನ್ನು ಮುಂದಕ್ಕೆ ಎಳೆದುಕೊಂಡರು.

ಒಳಹೊಕ್ಕ ವೀರನು ಬಲಗಡೆ ಹೊರಳಿ ಸುಮಾರು ಹದಿನೈದು ಮೆಟ್ಟಿಲುಗಳನ್ನು ಕೆಳಗೆ ಇಳಿದನು. ಮುಂದೆ ಸಮನಾದ ನೆಲದ ಮೇಲೆ ಇಪ್ಪತ್ತು ಹೆಜ್ಜೆ ನಡೆದು, ಚಿಕ್ಕ ಪಡಸಾಲೆಯೊಂದನ್ನು ದಾಟಿ ಥಾಳ ನಂದಾದೀಪಗಳಿಂದ ಬೆಳ್ಳನೆ ಬೆಳಗುತ್ತಿರುವ ಕೋಣೆಯೊಂದರಲ್ಲಿ ಕಾಲಿಕ್ಕಿದನು. ಈ ಕೋಣೆ ಹರವಾಗಿದ್ದಿತು; ನೆಲದಡಿಯಲ್ಲಿ ಇದ್ದಗೂ ಅಲ್ಲಿ ಗಾಳಿ ಬೆಳಕಿನ ಕೊರತೆ ಕಾಣುತ್ತಿರಲಿಲ್ಲ. ಈ ಕೋಣೆಯಲ್ಲಿ ಪ್ರವೇಶಿಸಿದ ವೀರನು ಎಡಕ್ಕೆ ತಿರುಗಿದನು. ಇದಿರಿನ ಗೋಡೆಯಿಂದ ನಾಲ್ಕಡಿ ಚದುರದ, ಒಂದಡಿ ಎತ್ತರದ ಕಟ್ಟೆಯೊಂದು ಮುಂದಕ್ಕೆ ಚಾಚಿದ್ದುದು ಆತನಿಗೆ ಕಂಡಿತು. ಅದರ ಮೇಲೆ ದರ್ಭೆಗಳನ್ನು ಹರವಿ ಹುಲಿದೊಗಲನ್ನು ಹಾಸಿದ್ದರು. ಈ ಆಸನದ ಮೇಲೆ ಉನ್ನತಕಾಯನಾದ ಯೋಗಿಯೊಬ್ಬನು ಪದ್ಮಾಸನ ಹಾಕಿಕೊಂಡು ಧ್ಯಾನ ಮುದ್ರೆಯಲ್ಲಿ ಕುಳಿತಿದ್ದನು. ಆತನ ರೂಪು ತೇಜಃಪುಂಜವಾಗಿದ್ದು, ಮೈಬಣ್ಣವು ಪುಟವಿಕ್ಕಿದ ಚಿನ್ನದ ಕಾಂತಿಯನ್ನು ನಾಚಿಸುತ್ತಿದ್ದಿತು. ಆತನ ತಲೆ ಜಡೆಗಟ್ಟಿದ್ದು, ಕೊರಳು ರುದ್ರಾಕ್ಷಮಾಲೆಯಿಂದಲೂ ಕೈಮೈ ದಪ್ಪನೆಯ ಭಸ್ಮದ ರೇಖೆಗಳಿಂದಲೂ ಒಪ್ಪುತ್ತಿದ್ದುವು. ಆತನು ಸೊಂಟಕ್ಕೊಂದು ಬೆನ್ನಿಗೊಂದು ಹುಲಿದೊಗಲನ್ನು ಸುತ್ತಿಕೊಂಡಿದ್ದನು.

ಯೋಗಿಯ ತಲೆಯಮೇಲೆ ಶಿರಿದಂತರದಲ್ಲಿ ಚಿನ್ನರನ್ನದಿಂದ ರಚಿಸಿದ ಮುಂದಾಸನದಲ್ಲಿ ದೇದೀಪ್ಯಮಾನವಾದ ದೇವಿಯ ವಿಗ್ರಹವೊಂದು ರಾರಾಜಿಸುತಲಿದ್ದಿತು. ಒಂದಡಿ ಎತ್ತರದ ಸುವರ್ಣಮಯವಾದ ಈ ಮೂರ್ತಿ ಥಳಥಳಿಸುವ ಮಾಣಿಕದ ಮಕುಟದಿಂದಲೂ ಮಣಿಕದ ಮಕುಟದಿಂದಲೂ ಹೊಳಿಹೊಳೆವ ವಜ್ರದ ಕಣ್ಣುಗಳಿಂದಲೂ ಝಗಝಗಿಸುವ ಇಂದ್ರನೀಲ, ಪಚ್ಚೆ, ಮೊದಲಾದ ನವರತ್ನಹಾರಗಳಿಂದಲೂ ಜಾಜ್ವಲ್ಯಮಾನವಾಗಿದ್ದಿತು.

ಒಳಗೆ ಬಂದ ವೀರನು ನಸುಹೊತ್ತು ಕೈಜೋಡಿಸಿ ನಿಂತುಕೊಂಡು, ಬಳಿಕ ಯೋಗಿಯ ಮುಂದೆ ಸುದೀರ್ಘ ಸಾಷ್ಟಾಂಗ ಪ್ರಣಾಮಮಾಡಿದನು. ಆ ಮೇಲೆ ಎದ್ದು ಕಟ್ಟೆಯ ಕೆಳಗೆ ಇರಿಸಿದ್ದ ಯೋಗಿಯ ಪಾದುಕೆಗಳ ಬಳಿ ಸರಿದು, ಅವುಗಳಮೇಲೆ ಕತ್ತರಿಯಂತೆ ಸಂಧಿಸಿದ ತನ್ನ ಎರಡು ಹಸ್ತಗಳನ್ನೂ ತಲೆಯನ್ನೂ ಊರಿದನು. ತಲ್ಲೀನತೆಯಲ್ಲಿ ಕೆಲ ನಿಮಿಷಗಳು ಓಡುತ್ತಿರಲು, ಎಲ್ಲಿಂದಲೋ ಸುಳಿದುಬಂದ ಆಳವಾದ ಈ ಶಬ್ದಗಳು ಆತನ ಕಿವಿಗವಿಯಲ್ಲಿ ನುಗ್ಗಿದುವು:

"ಆಚುಗಿ, ಎದ್ದೇಳು; ಕುಳಿತುಕೋ."

ವೀರನು ಎದ್ದು ಪಕ್ಕದಲ್ಲಿಯ ಒಂದು ದರ್ಭಾಸನವನ್ನು ಎಳೆದುಕೊಂಡು ಕುಳಿತನು. ಭಯಭಕ್ತಿಯಿಂದ ನೋಟವನ್ನು ಎತ್ತರಿಸೆ ಯೋಗಿಯತ್ತ ನಿಟ್ಟಿಸಿದನು. ಸಮಾಧಿಲೋಕದಿಂದ ಇಳಿದುಬಂದ ಆತನು ಇದೀಗ ತನ್ನ ಕಡೆಗೆ ಕಟಾಕ್ಷವನ್ನು ಬೀರುತ್ತಿರುವನು ಎಂಬುದು ಆತನ ಗಮನಕ್ಕೆ ಬಂದಿತು. ಯೋಗಿಯ ಮುಖದಿಂದ ಮಾತುಗಳು ಮೂಡಿದುವು:

"ಆಚುಗಿ, ಯೋಚಿಸಬೇಡ. ಇಂದು ವಿಜಯದಶಮಿ; ದೇವಿಯ ವಿಜಯೋತ್ಸವ. ದೇವಿಯ ಕರುಣೆಯಿಂದ ನಿನ್ನ ಕಾರ್ಯಗಳು ಜಯಶಾಲಿಯಾಗುವುವು."

ಯೋಗಿಯ ಈ ಆಶ್ವಾಸನ ವಚನದಿಂದ ವೀರನ ಹೃದಯದಲ್ಲಿ ಸಮಾಧಾನವೂ ಆತ್ಮವಿಶ್ವಾಸವೂ ಬೇರೂರಿತು. ಆತನು ಧೈರ್ಯಗೊಂಡು ತನ್ನ ಬಗೆಯನ್ನು ಕದಡುತ್ತಿರುವ ಎಣಿಕೆಗಳನ್ನು ವಿವರವಾಗಿ ಅರಿಕೆಮಾಡಲು ಅಣಿಯಾದನು.

"ಗುರುರಾಜ, ಅಲ್ಪಮತಿಯ ಮೂಲಕ ಒಂದೆರಡು ಸಂದೇಹದ ವಿಷಯಗಳನ್ನು ಕೇಳಿಕೊಳ್ಳುವೆ. ದಯವಿಟ್ಟು ಮನ್ನಿಸುವುದು. ಚಕ್ರೇಶ್ವರರ ಆಜ್ಞಾಪತ್ರವು ಬಂದಂದಿನಿಂದ ನನ್ನ ಮನಸ್ಸಿನ ಸ್ಥಿತಿ ವಿಲಕ್ಷಣವಾಗಿದೆ. ಆ ಆಜ್ಞಾಪತ್ರವೋ, ರಾಜಧಾನಿಯಿಂದ ಬಂದುದಲ್ಲ. ಬನವಾಸಿ ಮಂಡಲದ ಯಾವುದೋ ಒಂದು ಶಿಬಿರದಿಂದ! ಅವರಾ ಆಜ್ಞೆಯ ಅರ್ಥವೂ ಸರಿಯಾಗಿ ಹೊಳೆಯಲಿಲ್ಲ. ಹಿಂದು ಮುಂದಿನ ಯಾವ ಸಂದರ್ಭವನ್ನೂ ಸೂಚಿಸದೆ

ಇದ್ದಕ್ಕಿದ್ದಹಾಗೆ 'ಹದಿನೈದು ದಿನಗಳಲ್ಲಿ ಸಾಧ್ಯವಾದಷ್ಟು ಹೆಚ್ಚು ಜನ ನಿನ್ನ ಕೆಚ್ಚಿದೆಯ ಬಂಟರನ್ನು ಕೂಡಿಸಿಕೊಂಡು ರಾಜಧಾನಿಗೆ ಹೊರಟುಬರುವುದು' ಎಂದು ಅಪ್ಪಣೆಕೊಡಿಸಿದ್ದಾರೆ ಆ ಓಲೆಯಲ್ಲಿ. ಹೀಗೆ ಇಷ್ಟು ಅವಸರದ ಆಜ್ಞೆ ಈ ಮೊದಲು ಆಗಿರಲಿಲ್ಲ.

"ಕೆಲ ದಿನಗಳ ಆಚೆ ನೊಳಂಬವಾಡಿಯಲ್ಲಿ ಚೋಳರಸರ ಮೇಲೆ ನಡೆದ ದಂಡಯಾತ್ರೆಗಾಗಿ ಹೀಗೆಯೆ ಕರೆ ಬಂದಿದ್ದಿತು. ಆದರೆ ಇಷ್ಟು ಅವಸರವಿರಲಿಲ್ಲ. ಆ ದಂಡಯಾತ್ರೆಯಲ್ಲಿ ಜಯಶೀಲನಾಗಿ ಮರಳಿದ ಬಳಿಕ ಕೆಲಕಾಲ ನನಗೆ ವಿಶ್ರಾಂತಿ ದೊರೆತಿದೆ. ಆದರೆ ಚಕ್ರೇಶ್ವರರಿಗೆ ಮಾತ್ರ ವಿರಾಮವಿಲ್ಲವೆಂದು ಕೇಳಿದ್ದೇನೆ. ನಸು ಹಿಂದೆ ಅವರು ಗಂಗವಾಡಿಯತ್ತ ಪಯಣ ಬೆಳಸಿದ ಅಸ್ಪಷ್ಟ ಸಮಾಚಾರ ರಾಜಧಾನಿಯಲ್ಲಿಯ ನನ್ನ ಸ್ನೇಹಿತರ ಮುಖಾಂತರ ತಿಳಿಯಬಂದಿತು. ಆ ಮೇಲಿನ ಅವರ ವರ್ತಮಾನವೆಂದರೆ ಇದುವೆ; ಚಕ್ರೇಶ್ವರರ ಭಯಸೂಚಕವಾದ ಈ ಓಲೆ. ಅದಕ್ಕಾಗಿ ಅವರಿಗೆ ಯಾವ ಆತಂಕವೋ, ಎಂತಹ ಸಂಕಟವೋ ಎಂದು ನನ್ನ ಎದೆ ಒಳಗೊಳಗೇ ಕುದಿಯುತ್ತಲಿದೆ."

"ಚಿಂತಿಸಬೇಡ ಆಚುಗಿ. ಮಹಾರಾಜಧಾನಿಗೆ ಹೋದಬಳಿಕ ಎಲ್ಲವೂ ವಿಶದವಾಗುವುದು."

"ಚಕ್ರೇಶ್ವರರು ನನ್ನಲ್ಲಿ ಇರಿಸಿದ ಹೆಚ್ಚಿನ ವಿಶ್ವಾಸಕ್ಕೆ ತಕ್ಕುದಾಗಿ ಈ ಸಂಕಟದಲ್ಲಿ ಅವರಿಗೆ ನನ್ನಿಂದ ವಿಶೇಷ ಸೇವೆ ಸಲ್ಲಬೇಕು ಎಂಬುದೇ ನನ್ನ ಹೃದಯದ ಹಂಬಲ. ಅವರಾ ಓಲೆಯನ್ನು ನೋಡಿದರೆ ಅವರಿಗೆ ಏನೋ ಒಂದು ಕಷ್ಟದ ಸಂದರ್ಭ ಬಂದಂತೆ ತೋರುತ್ತದೆ."

"ಕಲ್ಯಾಣನಗರಿಗೆ ತೆರಳಿದ ಬಳಿಕ ಎಲ್ಲವು ತಿಳಿಯುವುದು. ಕೆಲಕಾಲ ಕ್ಲೇಶಕರವಾಗಲಿರುವ ಈ ಸಂಕಟದಿಂದ ಸಾಮ್ರಾಜ್ಯಕ್ಕೆ ಅಪಾಯವಿಲ್ಲ. ಕುಂತಲೇಶ್ವರನ ಈ ವಿಷಮ ಸಮಯವು ನಿನ್ನ ಮೂಲಕ ಸಮನಾಗುವುದು. ಈ ಸನ್ನಿವೇಶವು ಸುಮಂಗಲದಿಂದ ಸಮಾಪ್ತವಾಗುವುದು."

"ಗುರುರಾಜ, ತಮ್ಮೀ ವರದ ವಾಣಿಯಿಂದ ನನ್ನ ಆಸೆ ಉತ್ಸಾಹಗಳು ನೂರು ನೂರು ವಿಧವಾಗಿ ಕುದುರುತ್ತಲಿವೆ. ಈ ಕಷ್ಟದಲ್ಲಿ ಚಕ್ರೇಶ್ವರ

ರಿಗೆ ಹೆಚ್ಚಿನ ಸೇವೆ ಸಲ್ಲಿಸುವ ಪುಣ್ಯ ನನ್ನ ಭಾಗದಲ್ಲಿ ಇದೆ ಎಂದು ತಿಳಿದು ನನ್ನ ಮೈ ಉಬ್ಬುತ್ತಲಿದೆ.''

ಆಚುಗಿಯ ಉತ್ಕಟವಾದ ಭಕ್ತಿವಿಶ್ವಾಸವು ಯೋಗಿಯ ಮನವನ್ನು ಮೆಚ್ಚಿಸಿತು. ಆತನ ಮನೋವ್ಯಥೆ ಕರುಣವನ್ನು ಕೆರಳಿಸಿತು. ಚಕ್ರೇಶ್ವರನ ಸೇವಾ ವಿಷಯದಲ್ಲಿಯ ಆತನ ಆತುರ ಉತ್ತೇಜನಾರ್ಹವೆನಿಸಿತು. ಮಿತ ವಚನಿಯಾದ ಯೋಗಿ ಶಿಷ್ಯನ ಈ ಭಾವನೆಗೆ ಮನಸೋತು ಮೈಮರೆತು ಮಾತುಗಳನ್ನು ಮುಂದಕ್ಕೆ ಬೆಳಸಿದನು:

"ಆಚುಗಿ, ನೀನು ಭಾಗ್ಯಶಾಲಿ. ಚಾಲುಕ್ಯರ ಸೇವೆಯಲ್ಲಿ ಸರ್ವಸ್ವವನ್ನು ಸಮರ್ಪಿಸುವ ಏಕಾಂತ ಸ್ವಾಮಿನಿಷ್ಠೆಗೆ ನಿನ್ನ ಕುಲವು ಮೀಸಲಾಗಿದೆ. ತ್ರಿಭುವನ ಮಲ್ಲ ಕುಂತಲೇಶ್ವರನ ಉತ್ತರ ಮತ್ತು ದಕ್ಷಿಣದೇಶದ ಅನೇಕ ದಂಡಯಾತ್ರೆಗಳಲ್ಲಿ ಪ್ರಾಮುಖ್ಯವಾಗಿ ಭಾಗವಹಿಸಿ ನೀನು ಹೆಚ್ಚಿನ ಕಾರ್ಯ ಸಾಹಸಗಳನ್ನು ಪ್ರಕಟಿಸಿರುವೆ. ನಿನ್ನೀ ಪರಾಕ್ರಮಕ್ಕೆ ಪ್ರಸನ್ನನಾದ ಆತನು ನಿನಗೆ 'ತ್ರಿಭುವನಮಲ್ಲ ಕೇಸರಿ' ಎಂಬ ಪ್ರೀತಿಯ ಮತ್ತು ಗೌರವದ ಬಿರುದನ್ನು ಸಲ್ಲಿಸಿರುವನು. ಆದರೆ ಪ್ರಸ್ತುತ ಸಂದರ್ಭವು ಮಿಕ್ಕ ಸಂದರ್ಭಗಳಿಗಿಂತ ಮಿಗಿಲಾಗುವುದು. ನೀನು ಭಾವೀ ಸಂಗ್ರಾಮದಲ್ಲಿ ಸಮರಭೈರವನಾಗಿ ಮೆರೆವೆ. ಬೇರಾವ ಸಾಮಂತನಿಗಾಗಲಿ, ಮಹಾ ಮಂಡಲೇಶ್ವರನಿಗಾಗಲಿ ಅಸದಳವಾದ ಅದ್ಭುತ ಸಾಹಸ ಕೃತಿಗಳು ನಿನ್ನಿಂದ ಘಟಿಸುವುವು. ಸಾಮ್ರಾಜ್ಯದ್ರೋಹಿಗಳ ತೇಜೋವಧೆ ಆಗುವುದು. ಕಡಲನ್ನು ಕಾಣದ ನಿನ್ನ ಕಾಳಗ ಕುದುರೆಗಳು ಸಾಗರ ಸ್ನಾನದಿಂದ ಪುಲಕಿತವಾಗುವುವು. ಉಂಡ ಉಪ್ಪಿಗೆ ಎರಡನ್ನು ಬಗೆದ ಉಪ್ಪಿನ ನಾಡವರ ಉಬ್ಬನ್ನು ಇಳಿಸಿ ಒಡೆಯನ ಉಪ್ಪನ್ನು ತೀರಿಸುವೆ. ನಿನ್ನಿಂದ ಪಶ್ಚಿಮ ಸಮುದ್ರಾಧಿಪತಿಯ ಗರ್ವಭಂಗವಾಗುವುದು.''

"ಗುರುರಾಜ, ತ್ರಿಕಾಲದರ್ಶಿಗಳ ಗೂಢವಾಕ್ಯಗಳ ಗರ್ಭಿತಾರ್ಥ ತಿಳಿಯುವುದು ಸುಲಭವಲ್ಲ. ಮಾಡಬೇಕೂ ಎಂದರೆ ನನ್ನಂತಹ ಪಾಮರನು ಏನು ತಾನೆ ಮಾಡಲು ಸಾಧ್ಯ? ಎಲ್ಲವು ತಮ್ಮ ಪುಣ್ಯಮಯ ಆಶೀರ್ವಾದದ ಫಲ.''

" ಆಚುಗಿ, ನನ್ನ ಆಶೀರ್ವಾದವಲ್ಲ; ಲೋಕೇಶ್ವರಿಯ ಕರುಣಾ ಕಟಾಕ್ಷ, ರಾಜನ್, ನನ್ನನ್ನು ನಂಬಿ ಆ ರಾಜೇಶ್ವರಿಯನ್ನು ಮರೆತೆಯಾ ? "

" ಇಲ್ಲ, ಇಲ್ಲ, ಗುರುರಾಜ, ಸರ್ವಥಾ ಇಲ್ಲ. ನನ್ನ ಕುಲದೇವಿಯಾದ ಆ ಭುವನೇಶ್ವರಿಯನ್ನು ನಾನು ಎಂದಾದರೂ ಮರೆವುದುಂಟೇ ? "

" ಆಚುಗಿ, ಆ ಜಗದಂಬೆ ಎಲ್ಲಿ ಇರುವಳು ? ಇಲ್ಲಿ ನೋಡು ಚೆನ್ನಾಗಿ. "

ಇದುವರೆಗೆ ಯೋಗಿಯನ್ನೇ ಲಕ್ಷಿಸುತ್ತ ಆತನಲ್ಲಿಯೆ ನೋಟವನ್ನು ನಟ್ಟಿದ್ದ ವೀರನು ತನ್ನ ಕಣ್ಣುಗಳನ್ನು ಮೇಲಕ್ಕೆ ಎತ್ತಿ ಆತನ ತಲೆಯ ಮೇಲೆ ವಿರಾಜಿಸುತಲಿದ್ದ ದೇವಿಯ ವಿಗ್ರಹವನ್ನು ಅವಲೋಕಿಸಿದನು. ನೋಡು ನೋಡುತ್ತಿರುವಂತೆ ಆ ಸ್ಥಳದಲ್ಲಿ ಆತನಿಗೆ ಅತ್ಯಂತ ಪ್ರಭಾಮಯವಾದ ವಿಲಕ್ಷಣ ದಿವ್ಯಜ್ಯೋತಿಯೊಂದು ಕಂಡಿತು. ಬರುಬರುತ್ತ ಆ ಜ್ಯೋತಿ ಬೆಳೆದುಕೊಂಡು ಹೋಗಿ ಬ್ರಹ್ಮಾಂಡವನ್ನು ವ್ಯಾಪಿಸಿ ಸೂರ್ಯ, ಚಂದ್ರ, ನಕ್ಷತ್ರಾದಿ ಲೋಕಗಳನ್ನು ತನ್ನ ಒಡಲಲ್ಲಿ ಇಟ್ಟುಕೊಂಡಂತೆ ತೋರಿತು. ಮುಂದೆ ಅದು ಲೌಕಿಕ ಲಾವಣ್ಯಮಯ ಲೋಕ ಸುಂದರಿಯ ರೂಪವನ್ನು ಧರಿಸಿ ವಿಶ್ವಮಾತೆಯಾಗಿ ತಾಯ್ತನದ ಸಿರಿಯಿಂದ ಶೋಭಿಸಿತು. ಆ ಮೇಲೆ ಆ ಆಕೃತಿ ಮಾಯವಾಗಿ ಆ ಎಡೆಯಲ್ಲಿ ಎತ್ತು ಮತ್ತು ಸಿಂಗ ಈ ವಾಹನಗಳ ಮೇಲೆ ಕುಳಿತ ಶಿವ ಮತ್ತು ಪಾರ್ವತಿಯರ ಮೂರ್ತಿಗಳು ಕಾಣಿಸಿಕೊಂಡುವು. ಅವರ ಕೆಳಗಡೆ ಯೋಗಿ ಕುಳಿತಿದ್ದ ಸ್ಥಳದಲ್ಲಿ ನವಿಲು ಏರಿದ ಸ್ಫುರದ್ರೂಪಿ ಕಾರ್ತಿಕೇಯನು ಕಂಗೊಳಿಸತೊಡಗಿದನು.

ಈ ದೃಶ್ಯವನ್ನು ದಿಗಿಲುಗೊಂಡವನಾಗಿ ನೋಡುತ್ತ ಕುಳಿತಿದ್ದ ವೀರನು ದಿಗ್ಗನೆ ಎದ್ದು ನಿಂತನು. ರೋಮಾಂಚಪೂರಿತ ಸ್ಥಿತಿಯಲ್ಲಿ ಎರಡು ಕೈಗಳನ್ನು ಮೇಲಕ್ಕೆ ಎತ್ತಿದ್ದನು. " ಮಹಾಮಾಯೆ ! ಜಗದಂಬೆ ! ಭುವನೇಶ್ವರಿ ! ತಾಯೆ ! ಸಲಹು ಸಲಹು " ಎಂಬ ಆರ್ತತೆಯ ಉದ್ಗಾರಗಳು ಆತನ ಮುಖದಿಂದ ಹೊರ ಹೊಮ್ಮಿದುವು, ಭಕ್ತಿಪರವಶನಾಗಿ ಸಾಷ್ಟಾಂಗ ಮಾಡುತ್ತ ಆತನು ಭೂಮಿಯ ಮೇಲೆ ಬಿದ್ದುಬಿಟ್ಟನು.

ಕೆಲ ನಿಮಿಷಗಳು ಕಳೆದುವು. ವೀರನು ಎಚ್ಚೆತ್ತನು. ಎದ್ದು ನಿಂತು ಕಣ್ಣರಳಿಸಿ ನೋಡಿದನು. ನಸು ಹಿಂದೆ ಆತನು ಕಂಡ ದೃಶ್ಯವದಾವುದೂ ಇರಲಿಲ್ಲ. ಆತನ ಮುಂದೆ ಆಸನಸ್ಥ ಯೋಗಿ ನಿತಾಂತ ಶಾಂತಿಯಿಂದ ಕುಳಿತಿದ್ದನು. ಆತನ ಮಸ್ತಕದ ಮೇಲೆ ದೇವಿಯ ದೀಪ್ತಿಮಯ ವಿಗ್ರಹವು ಕಾಂತಿಯಿಂದ ಬೆಳಗುತಲಿದ್ದಿತು. ಅವರಿಬ್ಬರನ್ನೂ ಧ್ಯಾನಿಸುತ್ತ ವೀರನು ಸ್ತಬ್ಧದಾಗಿ ನಿಂತುಕೊಂಡನು.

ಸ್ವಲ್ಪ ಹೊತ್ತಾದ ಬಳಿಕ ಯೋಗಿ ವೀರನನ್ನು ಸಂಬೋಧಿಸಿದನು. “ಆಚುಗಿ, ನಿನ್ನ ಸಕಲ ರಾಜಕೀಯ ಪರಿವಾರದೊಂದಿಗೆ ಇಲ್ಲಿಗೆ ಬಂದಿರುವೆಯಷ್ಟೆ? ಇಂದಿನ ದೇವಿಯ ಉತ್ಸವವನ್ನು ಸಂಭ್ರಮದಿಂದ ನೆರವೇರಿಸುವೆಯೆಷ್ಟೆ? ಉತ್ಸವದ ಕಾರ್ಯಕಲಾಪಗಳು ನಿನ್ನ ಸಾಹಚರ್ಯದಿಂದ ಸೊಬಗುಗೊಳ್ಳಲಿ.”

“ಗುರುರಾಜರ ಅಪ್ಪಣೆ.”

ವೀರನು ಯೋಗಿಗೆ ಮತ್ತೊಂದು ಬಾರಿ ಸಾಷ್ಟಾಂಗವೆರಗಿದನು. ಮೋರೆಯನ್ನು ತಿರುಗದೆ ಸಂಮುಖದಿಂದ ಹಾಗೆಯೆ ಹಿಂದೆ ಹಿಂದೆ ಹೆಜ್ಜೆಯಿಕ್ಕುತ್ತ ಹೊರಗೆ ಬಂದನು. ಗುಹೆಯ ಕದವನ್ನು ತೆರೆದನು. ಗುಡಿಯಲ್ಲಿ ದೇವಿಗೆ ಮುಂಜಾವದ ಮಂಗಳಾರತಿ ನಡೆಯುತ್ತಿದ್ದ ಸದ್ದು ಕೇಳಿಸಿತು. ಗಂಟೆಗಳು ಗರ್ಜಿಸುತ್ತಿದ್ದುವು.

ಗುಹೆಯ ಬಾಗಿಲಲ್ಲಿ ಭಾನುಶಕ್ತಿಗಳು ಕಾದುಕೊಂಡು ನಿಂತಿದ್ದರು. ವೀರನು ಭಾನುಶಕ್ತಿಗಳ ಮುಖಮುದ್ರೆಯಲ್ಲಿ ಸಂತೋಷದ ಸುಳಿಯನ್ನು ಕಂಡನು. ವೀರನ ಮುಖದ ಮೇಲಿನ ಆತ್ಮವಿಶ್ವಾಸದ ಮಿಂಚನ್ನು ಭಾನುಶಕ್ತಿಗಳು ಗುರುತಿಸಿದರು.

---

## ಕಿರಣ ಮೂರು

# ಶ್ರೀ ಕುಕ್ಕನೂರು

ವೀರನು ಅವಸರದಿಂದ ದೇವಾಲಯದ ಮುಖ ಮಂಟಪಕ್ಕೆ ಬಂದನು. ಅರ್ಚಕರು ಮಂಗಲಾರತಿಯನ್ನು ಹತ್ತಿಸುತ್ತಿದ್ದರು. 'ಮಹಾರಾಜರು, ಮಹಾರಾಜರು' ಎಂದು ಜನಗಳು ತಮ್ಮ ತಮ್ಮೊಳಗೆ ಪಿಸುಗುಟ್ಟುತ್ತ ಆಚೆಗೆ ಸರಿದು ನಿಂತರು. ರಾಜರು ನಸುಕಿನಲ್ಲಿಯೇ ಎದ್ದು ದೇವಾಲಯದತ್ತ ಹೋದ, ಸಮಾಚಾರವನ್ನು ಕೇಳಿ ಶಿಬಿರದಲ್ಲಿಯ ಮಂತ್ರಿ, ದಂಡನಾಯಕ, ಮೊದಲಾದ ಅಧಿಕಾರಿಗಳು ಲಗುಬಗೆಯಿಂದ ಎದ್ದು ಶುಚಿಯಾಗಿ ಗುಡಿಯ ಕಡೆಗೆ ಹೊರಟು ಬಂದಿದ್ದರು. ಈ ರಾಜ ಪರಿವಾರವು ಮಂಗಳಾರತಿಯ ಸಮಯಕ್ಕೆ ದೇವಾಲಯದ ಮುಖ ಮಂಟಪವನ್ನು ಮಿಕ್ಕಿ ಸಭಾ ಮಂಟಪ ದಲ್ಲಿಯೂ ತುಂಬಿದ್ದಿತು.

ಮಂಗಲಾರತಿ ಮುಗಿದ ಬಳಿಕ ರಾಜನಿಗೂ ಮತ್ತು ಅಧಿಕಾರಿಗಳಿಗೂ ಉಚಿತ ಮರ್ಯಾದೆಯೊಂದಿಗೆ ದೇವಿಯ ಪ್ರಸಾದವನ್ನು ಸಲ್ಲಿಸಲಾಯಿತು. ಬಳಿಕ ರಾಜನು ಮಂತ್ರಿಯನ್ನು ಒಂದು ಪಕ್ಕದಲ್ಲಿ ಕರೆದು ಅಂದಿನ ಉತ್ಸವ ವನ್ನು ಕುರಿತು ವಿವರವಾಗಿ ಸೂಚನೆಗಳನ್ನು ತಿಳುಹಿದನು. ಅಂದು ದೇವಿಗೆ ಮಹಾ ಪೂಜೆ, ಹನ್ನೊಂದು ಸಹಸ್ರ ರುದ್ರಾಭಿಷೇಕ, ಅದಕ್ಕೆ ತಕ್ಕಂತೆ ಅನ್ನ ಸಂತರ್ಪಣೆ ಮೊದಲಾದ ವಿಧಾನಗಳು ಬಹು ದಕ್ಷತೆಯಿಂದಲೂ ಘನತೆ ಯಿಂದಲೂ ನೆರವೇರತಕ್ಕುದು; ಒಂದು ಕೊರತೆಯು ಬರಕೂಡದು, ಎಂಬು ದಾಗಿ ವಿಧಿಸಿದನು. ಅಷ್ಟರಲ್ಲಿ 'ದೇವಿಯ ಪುರಾಣ ಪ್ರಾರಂಭಿಸಲಿವೆ; ದಯಮಾಡಿಸಬೇಕು' ಎಂದು ಅರ್ಚಕನೊಬ್ಬನು ಬಂದು ಅರಸನಿಗೆ ಅರಿಕೆ ಮಾಡಿದನು.

ಅರಸನು ಸಭಾಮಂಟಪದಲ್ಲಿ ತನಗಾಗಿ ಇರಿಸಿದ್ದ ಆಸನದ ಮೇಲೆ ಬಂದು ಕುಳಿತೊಡನೆ ಚತುರ್ವೇದಿ ಪಂಡಿತರು ಪ್ರವಚನವನ್ನು ಪ್ರಾರಂಭಿಸಿ ದರು. ಅವರು ತಮ್ಮ ಮುಂದೆ ವ್ಯಾಸಪೀಠದ ಮೇಲೆ ಇರಿಸಿದ್ದ ತಾಳೆ ಗರಿಯ ಹೊತ್ತಿಗೆಯ ಓಲೆಗಳನ್ನು ಓದುತ್ತ, ತಾವು ಓದಿದ ಸಂಸ್ಕೃತ ಮತ್ತು

ಹಳಗನ್ನಡ ಗದ್ಯ ಪದ್ಯಗಳಿಗೆ ಅರ್ಥಗಳನ್ನು ವಿವರಿಸುತ್ತ ವ್ಯಾಖ್ಯಾನವನ್ನು ಮುಂದುವರಿಸಿದರು. ದೇವಿಯ ಮಹಿಮೆ ಮತ್ತು ಆಕೆಯ ಆವಾಸಸ್ಥಾನವಾದ ಕುಕ್ಕನೂರು ಕ್ಷೇತ್ರದ ಘನತೆ ಅವರ ಪ್ರವಚನದ ಮುಖ್ಯ ವಿಷಯವಾಗಿತ್ತು. ಅವರ ಪ್ರತಿಪಾದನೆಯ ಮುಖ್ಯಾಂಶವು ಈ ವಿಧವಾಗಿತ್ತು.

ಈ ಚರಾಚರ ವಿಶ್ವವನ್ನು ಆಳುವ ಅನಾದ್ಯನಂತ ಶಕ್ತಿಗಳು ಎರಡು: ಒಂದು ಪುರುಷ, ಇನ್ನೊಂದು ಸ್ತ್ರೀ; ಇದುವೇ ಪ್ರಕೃತಿ. ಇವರುಗಳೇ ಶಿವ ಮತ್ತು ಉಮೆ ಇಲ್ಲವೆ ಶಕ್ತಿ ಎಂಬ ದೇವತಾ ಸಂಕೇತದಿಂದ ಲೋಕದಲ್ಲಿ ಪ್ರಸಿದ್ಧಿ ಪಡೆದಿರುವರು. ಶಿವನಿಗೆ ರುದ್ರ, ಶಂಕರ, ಈಶಾನ, ಶಂಭು ಮೊದಲಾದ ನಾನಾ ರೂಪಗಳು; ಉಮೆಗೆ ಈಶ್ವರಿ, ಶಂಕರಿ, ಗೌರಿ, ಗಿರಿಜೆ, ಕಾಲೀ, ಚಾಮುಂಡಿ, ಶಿವಶಕ್ತಿ, ಮೊದಲಾದ ಸಂಕೇತ ರೂಪಗಳು. ಶಿವನಿದ್ದಲ್ಲಿ ಶಕ್ತಿ, ಶಕ್ತಿಯಿದ್ದೆಡೆ ಶಿವ, ನಿತ್ಯ ಇರತಕ್ಕವರೇ; ಅವರಿಗೆ ಅಗಲಿಕೆಯಿಲ್ಲ. ಆದರೆ ಸ್ಥಳ ವಿಶೇಷತೆಯ ಮೂಲಕ ಪ್ರಪಂಚದಲ್ಲಿ ಕೆಲ ಊರುಗಳು ಶಿವಪ್ರಾಧಾನ್ಯದಿಂದ ಶಿವಕ್ಷೇತ್ರಗಳೆಂದೂ ಶಕ್ತಿಯ ಗೌರವದಿಂದ ಶಕ್ತಿಪೀಠಗಳೆಂದೂ ನಾಮಾಂಕಿತವಾಗಿರುವುವು. ಇಂತಹ ಶಕ್ತಿಪೀಠಗಳಲ್ಲಿ ಸುಪ್ರಸಿದ್ಧವಾದುದು ನಮ್ಮೀ ಶ್ರೀ ಕುಕ್ಕನೂರು.

ಏಳು ಕಡಲುಗಳಿಂದ ಸುತ್ತುವರಿದ ಇಳೆಯ ಏಳು ದ್ವೀಪಗಳಲ್ಲಿ ಜಂಬೂದ್ವೀಪ ಒಂದು. ಈ ದ್ವೀಪದಲ್ಲಿ ದೇವತೆಗಳ ನಿವಾಸಸ್ಥಾನವಾದ ಮೇರುಗಿರಿ ಎಂಬ ಹೊನ್ನಿನ ಬೆಟ್ಟ ಇರುವುದು. ಈ ಬೆಟ್ಟದ ತೆಂಕಲಿಗೆ ಭಾರತಕ್ಷೇತ್ರವಿದೆ. ಭಾರತಕ್ಷೇತ್ರದ ದಕ್ಷಿಣ ಭಾಗದಲ್ಲಿ ಕುಂತಳದೇಶ ನೆಲಸಿದೆ. ಇದುವೆ ನಮ್ಮ ನಚ್ಚಿನ ತಾಯ್ನೆಲ ಕನ್ನಡನಾಡು.

ಕುಂತಳ ಅತಿ ರಮಣೀಯವಾದ ದೇಶ. ನಿಸರ್ಗ ಮತ್ತು ನಾಗರಿಕತೆಯ ಸಂಪತ್ತಿಯಿಂದ ಸಮೃದ್ಧವಾದುದು. ಭೂ ರಮಣಿಯ ಕುಂತಲ ಎಂದರೆ ಕೇಶ ಎಂಬಂತೆ ಮಿಗಿಲಾದ ಮನೋಹರತೆಯಿಂದ ಕೂಡಿದೆ. ಕುಂತಳ ಎಲ್ಲ ದೇಶಗಳಲ್ಲಿ ಉನ್ನತವಾದುದು. ಚೋಳರಸರು ಆಳುವ ಕಾಂಚೀ ದೇಶದವರೇ ಆಗಲಿ, ಪರಮಾರ ಮೊದಲಾದ ರಾಜರ ಆಡಳಿತಕ್ಕೆ ಒಳಪಟ್ಟ ಮಧ್ಯದೇಶದವರೇ ಆಗಲಿ, ನಮ್ಮ ಕುಂತಳ ನಾಡಿನವರೊಡನೆ ಹಗೆ

ಕಟ್ಟಿ ಎಷ್ಟೇ ಹೋರಾಡಲಿ ಅವರ ನಾಡುಗಳು ನಮ್ಮ ನಾಡಿಗೆ ಸಮನಾಗ ಬಲ್ಲವೇ ?

ಕುಂತಳ ದೇಶದಲ್ಲಿ ಬೆಳುವಲ ಎಂಬ ನಾಡು; ಅದರಲ್ಲಿ ಕುಕ್ಕನೂರು ಎಂಬ ಕಂಪಣ; ಅದರ ಮುಖ್ಯ ಪಟ್ಟಣ ಈ ಶ್ರೀ ಕುಕ್ಕನೂರು. ಕುಂತಳವು ಭೂದೇವಿಯ ಉತ್ತಮಾಂಗ ಎಂದರೆ ತಲೆ ಎಂದು ಇಟ್ಟುಕೊಳ್ಳುವ. ಅದರಲ್ಲಿ ಮಕುಟದಂತೆ ವಿರಾಜಿಸುವುದು ಬೆಳುವಲ. ಕುಕ್ಕನೂರು ಕಂಪಣ ಆ ಮಕುಟಲ್ಲಿಯ ಚಿನ್ನದ ಹೂ. ಅದನ್ನು ಮೆರಗು ಗೊಳಿಸುತ್ತಿರುವುದು ಶ್ರೀ ಕುಕ್ಕನೂರು ಎಂಬ ಮಾಣಿಕ.

ಈ ಊರು ಮಹತ್ತಾದ ಅಗ್ರಹಾರ, ಪುಣ್ಯಕ್ಷೇತ್ರ, ಸಿರಿಯ ತವರು, ವಿದ್ಯೆಯ ನೆಲೆ, ಧರ್ಮದ ನಿಲಯ, ಕಲೆಯ ಕ್ರೀಡಾರಂಗವಾಗಿದೆ. ದೇವತೆಗಳ ನಿವಾಸಸ್ಥಾನವಾದುದರಿಂದ ಸಿದ್ಧಕ್ಷೇತ್ರವೆನಿಸಿ ಸಿದ್ಧಕ್ಷೇತ್ರ ಶಿರೋಮಣಿ ಎಂದು ಖ್ಯಾತಿವೆತ್ತಿದೆ. ಇಲ್ಲಿಯ ದೇವಾಲಯಗಳಲ್ಲಿ ಯಾವಾಗಲೂ ವೇದ ಘೋಷವು ವಿಜೃಂಭಿಸುತ್ತಿರುವುದು; ಪುರಾಣ, ಇತಿಹಾಸ, ಕಾವ್ಯ, ವ್ಯಾಕರಣ, ನ್ಯಾಯ, ಮೀಮಾಂಸಾ, ವೇದಾಂತ, ಮೊದಲಾದ ಶಾಸ್ತ್ರಗಳ ಪ್ರವಚನ ಚರ್ಚೆಗಳು ನಡೆಯುತ್ತಿರುವುವು. ಇಲ್ಲಿ ಅನೇಕ ವಿದ್ಯಾರ್ಥಿಗಳು, ವಿದ್ಯಾವಂತರು, ಆಚಾರ್ಯರು, ತಪೋಧನರು ವಾಸಿಸುತ್ತಿರುವರು. ಇಲ್ಲಿಯ ವಿವಿಧ ವಿದ್ಯಾಕ್ರಮಗಳನ್ನು ಸರಾಗವಾಗಿ ಸದೋಚಿತ ಸಾಗಿಸಿಕೊಂಡು ಹೋಗಲು ಒಂದು ಸಾವಿರ ವಿಪ್ರಪ್ರಮುಖರು ನೆಲೆಸಿರುವರು.

ಈ ಪುಣ್ಯಕ್ಷೇತ್ರದ ಅಧಿಷ್ಠಾನದೇವತೆ ದೇವಿ. ದೇವಿಯ ದೇವಾಲಯವೇ ಸಕಲ ದೇವಾಲಯಗಳಲ್ಲಿ ಮುಖ್ಯವಾದುದು. ಇದರ ಪಕ್ಕದಲ್ಲಿ ನವಲಿಂಗೇಶ್ವರ, ಸುತ್ತಲು ಬ್ರಹ್ಮೇಶ್ವರ, ಗಣೇಶ್ವರ ಮೊದಲಾದ ಗುಡಿಗಳು ಕಂಗೊಳಿಸುತ್ತಿರುವುವು. ದೇವಿಯ ದೇವಾಲಯದಲ್ಲಿ ಶ್ರೀಜ್ಯೇಷ್ಠೆ, ಪ್ರಲಯಾಂಬೆ, ಕಪಾಲೀಶ್ವರರ ವಿಗ್ರಹಗಳು ಒಪ್ಪುತ್ತಿರುವುವು. ಶ್ರೀಜ್ಯೇಷ್ಠೆದೇವಿ, ಮಹಾಮಾಯೆ ಎಂಬ ಹೆಸರಿನಿಂದ, ಪ್ರಲಯಾಂಬೆ ಮಹಾಕಾಳಿ ಎಂದು, ಕಪಾಲೀಶನು ಭೈರವ, ಕ್ಷೇತ್ರಪಾಲ ಎಂಬುದಾಗಿ ಸಾಮಾನ್ಯರಿಗೆ ಸುಪರಿಚಿತರಾಗಿರುವರು. ದೇವಿಯ ಮೂಲಕವೂ, ಸ್ವಯಂಭುವಾದ ಒಂಬತ್ತು

ಶಿವಲಿಂಗಗಳ ಮೂಲಕವೂ, ಒಂಬತ್ತು ಶಕ್ತಿಪೀಠಗಳ ಮೂಲಕವೂ, ಆದಿಯ ಪೀಠದ ಅಂಬಿಕೆ, ಚಾಮುಂಡಿ, ವಾಸಂತಿ, ಶಾಂತೆ ಮೊದಲಾದ ದೇವಿಯರ ಮೂಲಕವೂ ಈ ಸ್ಥಳವು ಶಿವಶಕ್ತಿಸಂಪುಟಕ್ಷೇತ್ರವೆಂದು ಸುವಿಶ್ರುತವಾಗಿದೆ.

ದೇವಿಯ ದೇಗುಲದ ಮಹಾದ್ವಾರವು ಪೂರ್ವಾಭಿಮುಖವಾಗಿದ್ದರೂ ದೇವಿಯ ವಿಗ್ರಹವು ದಕ್ಷಿಣಮುಖವಾಗಿದೆ. ದಕ್ಷಿಣವು ಯಮರಾಜನ ದಿಕ್ಕು. ಯಮರಾಜನ ಮೇಲೆಯೂ ಈಕೆಯ ಅಧಿಕಾರ ನಡೆಯುವುದು ಎಂಬುದು ಇದರಿಂದ ಸೂಚಿತವಾಗುತ್ತದೆ. ದೇವಿಯ ನಿಗ್ರಹಾನುಗ್ರಹ ಶಕ್ತಿ ಹೆಚ್ಚಿನದು. ಈಕೆಯ ಕೃಪೆಯನ್ನು ಪಡೆದವರು ಲೋಕವನ್ನೇ ಜಯಿಸಲು ಸಮರ್ಥ ರಾಗುವರು. ಈಕೆ ಮುನಿದರೆ ಒದಗುವ ಅನರ್ಥಗಳಿಗೆ ಅಳವಿಲ್ಲ. ಈಕೆ ಎಷ್ಟರವಳು ಎಂದು ಕಡೆಗಣಿಸುವವರಿಗೆ ದೇವಿ ಬಹು ಭಯಪ್ರದೆ. ಹಿಂದಿನ ಯುಗದಲ್ಲಿ ಕುಂಭಕರ್ಣನು ದೇವಿಯನ್ನು ಲಕ್ಷಿಸದೆ ಸುಮ್ಮನೆ ಉಗ್ರತಪವನ್ನು ಆಚರಿಸಿದನು. ಬ್ರಹ್ಮದೇವನು ಮೆಚ್ಚಿ ವರವನ್ನು ಬೇಡು ಎಂದನು. ಆಗ ಆತನು ತಾನು ಎಲ್ಲ ದೇವರನ್ನೂ ಮೀರಬೇಕು ಎಂಬ ಅರ್ಥದ 'ನಿರ್ದೈವವಕ್ಕು' ಎಂಬ ವರವನ್ನು ಬೇಡಲು ಬಗೆದನು. ಆದರೆ ಆ ಹೊತ್ತಿಗೆ ದೇವಿ ಬಂದು ಆತನ ನಾಲಗೆಯಲ್ಲಿ ನಿಂತು ಮಾತನ್ನು ತಿರುಗಿಸುತ್ತ 'ನಿದ್ರೆಯಕ್ಕು' (ನಿದ್ದೆ ಬರಲಿ) ಎಂಬ ವಾಕ್ಯವನ್ನು ನುಡಿಸಿದಳು. ಆದಕ್ಕೆ ಬ್ರಹ್ಮದೇವನು 'ತಥಾಸ್ತು' ಎಂದನು. ಕೂಡಲೆ ಅವನು ನಿದ್ದೆಯಲ್ಲಿ ನಿಮಗ್ನನಾಗಿ ಹೊರಳಾಡಲಾರಂಭಿಸಿದನು !

ಒಬ್ಬ ದೇವಿಯನ್ನು ಒಲಿಸಿಕೊಳ್ಳದೆ ನೂರು ದೇವರುಗಳನ್ನು ಒಲಿಸಿ ಫಲವೇನು ? ಆದುದರಿಂದ ಜನಗಳೇ, ದೇವಿಯಲ್ಲಿ ಲೀನರಾಗಿ ಭಕ್ತಿಯಿಂದ ಸೇವೆ ಮಾಡಿರಿ. ದೇವಿಯ ಪ್ರಭಾವವು ಲೋಕೋತ್ತರವಾದುದು. ಲೋಕ ದಲ್ಲಿ 'ನಾ ನಾ' ಎನಿಸುವ ಮಹಾ ಮಹಾ ವೀರರು, ನಾಯಕರು, ಅರಸರು, ರಾಜರು, ಮಹಾರಾಜರುಗಳು ತಲೆಬಾಗಿ ಬಂದು ದೇವಿಯ ಅಡಿ ದಾವರೆಗಳಲ್ಲಿ ಎರಗುವರು, ಈಕೆಯ ಕರುಣಾ ಕಟಾಕ್ಷವನ್ನು ಕೋರುವರು.

ಚತುರ್ವೇದಿ ಪಂಡಿತರ ನಿರೂಪಣೆ ಮುಗಿಯಲು, ಭಕ್ತಿಯ ಉದ್ರೇಕ ಗೊಂಡ ಜನಗಳೆಲ್ಲರು ದೇವಿಗೆ ಪ್ರಣಾಮಮಾಡಿ ಹೊರಟುಹೋದರು

ರಾಜನು ತನ್ನ ಪರಿವಾರದೊಂದಿಗೆ ಮುಂದಿನ ಕಾರ್ಯಕ್ರಮಗಳನ್ನು ಇದಿರು ನೋಡುತ್ತ ತನ್ನ ಶಿಬಿರದತ್ತ ತೆರಳಿದನು.

* * * *

ನಮ್ಮೀಕಥೆ ನಮ್ಮೀಕನ್ನಡ ನಾಡಿಗೆ ಸಂಬಂಧಿಸಿದುದು ಎಂದು ಓದುಗರು ಇಷ್ಟರಲ್ಲಿ ಅರಿತುಕೊಂಡಿರಲು ಸಾಕು. ಆದರೆ ಈ ಕನ್ನಡ ನಾಡು ನಮ್ಮೀ ಕನ್ನಡ ನಾಡು ಮಾತ್ರ ಆಗಿರಲಿಲ್ಲ. ನಮ್ಮವರ ಕನ್ನಡ ನಾಡೇನೋ ಆಗಿತ್ತು. ಇಂದಿನ ಕರ್ನಾಟಕಕ್ಕೂ ಈ ಕಥಾಕಾಲದ ಕರ್ನಾಟಕಕ್ಕೂ ಅಜಗಜಾಂತರ. ಅಂದಿನ ಕರ್ನಾಟಕದಲ್ಲಿ ನಮ್ಮವರ ಆಳಿಕೆಯೆ ನಡೆಯುತ್ತಿತ್ತು. ಇಂಗ್ಲೀಷ್, ಮುಸಲ್ಮಾನ, ಮರಾಠಾ, ಮೊದಲಾದ ಅನ್ಯ ಜನಾಂಗದವರಾರೂ ನಮ್ಮ ನಾಡಿಗೆ ಬಂದಿರಲಿಲ್ಲ. ಇಂದಿನಂತೆ ಧರ್ಮ ಮತಗಳ ಮತ್ತು ಜಾತಿ-ಪಂಗಡಗಳ ಅನೈಕ್ಯದ ಬೇಗೆಯಲ್ಲಿ ಬೆಂದು ನರಳಾಡುವುದು ಆಗಿರಲಿಲ್ಲ, ಅಂದಿನ ಕರ್ನಾಟಕದಲ್ಲಿ!

ಅಂದಿನ ಕರ್ನಾಟಕವು ವಿಸ್ತಾರದಲ್ಲಿಯೂ ಹಿರಿದಾಗಿದ್ದಿತು. ಕಾವೇರಿ ಮತ್ತು ಗೋದಾವರಿ ನದಿಗಳ ಮೇರೆಯನ್ನು ಮೀರಿ ಹರಡಿಕೊಂಡಿತ್ತು. ಈ ಕರ್ನಾಟಕದ ಅರಸರು ಚಕ್ರವರ್ತಿಗಳು ಎನಿಸುತ್ತಿದ್ದರು. ಅವರ ಪ್ರಭಾವವು ದಕ್ಷಿಣ ಭಾರತದಂತೆ ಉತ್ತರ ಭಾರತದಲ್ಲಿಯೂ ಪಸರಿಸಿದ್ದಿತು. ಸುವಿಶ್ರುತವಾದ ಚಾಲುಕ್ಯ ಕುಲದ ತ್ರಿಭುವನಮಲ್ಲ ವಿಕ್ರಮಾದಿತ್ಯನೆಂಬ ಚಕ್ರೇಶ್ವರನು ಇದೀಗ ಕರ್ನಾಟಕದ ಮತ್ತು ನೆರೆಯ ನಾಡುಗಳ ಅಧಿಪತಿಯಾಗಿದ್ದನು. ಕರ್ನಾಟಕದ ಒಂದು ಮುಖ್ಯ ಪ್ರದೇಶಕ್ಕೆ ಕುಂತಳ ಎಂಬ ವಿಶಿಷ್ಟ ಹೆಸರು ರೂಢವಾದುದರಿಂದ ಕರ್ನಾಟಕದ ಸಮ್ರಾಜನು ಕುಂತಲಾಧಿಪತಿ, ಕುಂತಲ ಚಕ್ರವರ್ತಿ, ಕುಂತಲೇಶ್ವರ ಮೊದಲಾದ ಅರ್ಥವತ್ತಾದ ಸಂಕೇತದಿಂದ ಸಂಬೋಧಿತನಾಗುತ್ತಿದ್ದನು. ಈತನ ರಾಜಧಾನಿ ಈಗ ನೈಜಾಂ ರಾಜ್ಯಕ್ಕೆ ಸೇರಿರುವ ಕಲಬುರ್ಗಿಯ ಬಳಿಯ ಕಲ್ಯಾಣ ಎಂಬ ನಗರಿ.

ಕುಂತಲೇಶ್ವರನ ಅಂಕಿತದಲ್ಲಿ ಅನೇಕ ಚಿಕ್ಕ ಅರಸರು, ಸಾಮಂತರು, ಮಹಾ ಮಾಂಡಲೇಶ್ವರರು ಬಾಳಿದ್ದರು. ಅಂತಹರಲ್ಲಿ ಒಂದನೆಯ 'ಕಿರಣ'ದಲ್ಲಿ ಮಹಾ ಮಂಡಲೇಶ್ವರನೆಂದೂ ಎರಡನೆಯ 'ಕಿರಣ'ದಲ್ಲಿ 'ವೀರ'

ನೆಂದೂ ನಿರ್ದಿಷ್ಟನಾದ ಆಚುಗಿ ಇಲ್ಲವೆ ಆಚರಸನು ಒಬ್ಬನು. ಈತನ ಚಿಕ್ಕ ರಾಜ್ಯ ಎಂದರೆ ಸಂಸ್ಥಾನವು ಇಂದಿನ ನೈಜಾಂ ರಾಜ್ಯಕ್ಕೆ ಸೇರಿರುವ ಕೊಪ್ಪಳದ ನೆರೆಯ ಪ್ರದೇಶದಲ್ಲಿ ಇದ್ದಿತು. ಇಂದಿನ ಅನೇಕ ಊರುಗಳು ಅಂದಿನ ಕಾಲಕ್ಕೂ ಬಾಳಿದ್ದರೂ ಆವುಗಳ ಹೆಸರಿನಲ್ಲಿ ವ್ಯತ್ಯಾಸವಿದ್ದುದರಿಂದ ಒಮ್ಮೊಮ್ಮೆ ಅವುಗಳ ಗುರುತು ಸಿಕ್ಕುವಂತೆ ಇಲ್ಲ. ಇಂದಿನ ಕೊಪ್ಪಳ ಅಂದು ಕೊಪಣವಾಗಿತ್ತು. ಇಂದಿನ ಕುಕನೂರು ಅಂದು ಕುಕ್ಕನೂರು; ಬೆಣಕಲ್-ಬೆಣ್ಣೆಕಲ್; ಯಲಬುರ್ಗಿ-ಎರಂಬರಗೆ ಇಲ್ಲವೆ ಯುಲಂಬರಗಿ. ಈ ಊರುಗಳು ಈಗಿನ ಕೊಪ್ಪಳ ಜಿಲ್ಲೆಯಲ್ಲಿ ಇವೆ.

ಎರಂಬರಗೆ ಆಚರಸನ ಚಿಕ್ಕ ರಾಜಧಾನಿ. ಆಚರಸನ ರಾಜ್ಯದಲ್ಲಿ ಇಂದಿನ ಧಾರವಾಡ ಜಿಲ್ಲೆಯ ರೋಣ, ಸೂಡಿ, ಪಟ್ಟದಕಲ್, ನರೇಗಲ್ (ನರೆಯಂಗಲ್) ಮೊದಲಾದ ಊರುಗಳ ಪ್ರದೇಶವು ಅಡಕವಾಗಿತ್ತು. ಆಚರಸನದು ಸುಪ್ರಸಿದ್ಧವಾದ ಸಿಂದಕುಲ.

ಎರಂಬರಗೆಯಿಂದ ಸುಮಾರು ಮೂರು ಹರದಾರಿಯಲ್ಲಿ ಇದ್ದ ಕುಕ್ಕನೂರು ಆಚರಸನಿಗೆ ಪ್ರಿಯವಾಗಿದ್ದಿತು. ಏಕೆಂದರೆ ಈ ಊರಲ್ಲಿ ನೆಲಸಿ ನಾಮಾಂಕಿತಳಾಗಿದ್ದ ದೇವಿಯಲ್ಲಿ ಆತನಿಗೆ ಅಪಾರವಾದ ಭಕ್ತಿ ಊರಿಕೊಂಡಿತ್ತು. ಈ ದೇವಿ ಆತನಿಗೆ ಇಷ್ಟ ದೇವತೆಯೂ ಕುಲದೇವತೆಯೂ ಆಗಿದ್ದಳು. ಆತನೂ ಆತನ ಪರಿವಾರದವರೂ ಮೇಲಿಂದ ಮೇಲೆ ಈ ಊರಿಗೆ ಬರುತ್ತಿದ್ದರು.

ಈ ಊರಲ್ಲಿ ದೇವಿಯಲ್ಲದೆ ಆಚರಸನಿಗೆ ಇನ್ನೊಂದು ಬಲವಾದ ಆಕರ್ಷಣೆ ಇದ್ದಿತು. ದೇವಿಯ ಏಕಾಂತ ಭಕ್ತರೂ ತಪೋನಿಧಿಗಳೂ ಆದ ಯೋಗಿಗಳೊಬ್ಬರು ಆಚರನಿಗೆ ಅತ್ಯಂತ ಆದರಣೀಯರೂ ಗುರುಗಳೂ ಆಗಿದ್ದರು. ಇವರು ದೇವಿಯ ದೇವಾಲಯದ ಕೆಳಗಿನ ಗುಹೆಯಲ್ಲಿ ಇರುತ್ತಿದ್ದರು. ಇವರ ಹೆಸರು ಸಿದ್ಧಾಂತಿ ಕಳೇಶ್ವರ. ಇವರು ಕಾಳಾಮುಖ ಎಂಬ ಶೈವ ಪಂಗಡಕ್ಕೆ ಸೇರಿದ ಯತಿಗಳು. ಕುಕ್ಕನೂರು ಕ್ಷೇತ್ರದ ಸ್ಥಾನಪತಿಗಳಾಗಿದ್ದರು. ಭಾನುಶಕ್ತಿಯಂತಹ ಅನೇಕ ತಪಸ್ವಿಗಳೂ ಪಂಡಿತರೂ ಇವರ ಶಿಷ್ಯರಾಗಿದ್ದರು. ಇವರ ಅಸೀಮ ದೇವೀಭಕ್ತಿಯನ್ನೂ ಅದ್ಭುತ

ಯೋಗ ಸಾಮರ್ಥ್ಯವನ್ನೂ ನೋಡಿದ ಜನಗಳು ಇವರು ದೇವಿಯ ವರ ಪುತ್ರರು, ಕಾರ್ತಿಕೇಯನ ಅವತಾರ ಎಂದು ನಂಬುತ್ತಿದ್ದರು.

ಈ ಮೇರೆಗೆ ಮುಖ್ಯತಃ ಧರ್ಮಸ್ಥಳವಾಗಿದ್ದ ಕುಕ್ಕನೂರು ಆಚರಸನ ನಿಕಟ ಸಂಬಂಧದಿಂದಾಗಿ ರಾಜಕೀಯ ಗೌರವವನ್ನೂ ಪಡೆಯಿತು. ಈ ರಾಜಕೀಯ ಗೌರವವು ಈ ಸಲದ ಮನೋಮಿ ಹಬ್ಬದಲ್ಲಿ ಇನ್ನಿಷ್ಟು ಹೆಚ್ಚಿ, ಹಿಂದೆ ಎಂದೂ ಬಾರದಷ್ಟು ಮಹತ್ವವು ಈ ಊರಿಗೆ ಪ್ರಾಪ್ತವಾಯಿತು. ಚಕ್ರೇಶ್ವರನ ಅವಸರದ ಓಲೆ ಬಂದಂದಿನಿಂದ ಚಿಂತಾಕ್ರಾಂತನಾದ ಆಚರಸನು ತನ್ನ ಸ್ವಾಮಿಗೆ ಸರ್ವಮಂಗಳವಾಗಲಿ ಎಂಬ ಉದ್ದೇಶದಿಂದ ದೇವಿಯ ಪ್ರೀತ್ಯರ್ಥವಾಗಿ ನಿತ್ಯ ಪಂಚಾಮೃತ ಅಭಿಷೇಕ, ನಂದಾದೀಪ, ಸಂತರ್ಪಣೆ ಮೊದಲಾದ ವಿಧಾನಗಳು ನಡೆಯುವಂತೆ ಏರ್ಪಡಿಸಿದ್ದನು. ಕುಂತಲೇಶ್ವರನ ಆಗಾಮಿ ದಂಡಯಾತ್ರೆಗಾಗಿ ಸಂಗ್ರಹಿಸುತ್ತಿದ್ದ ಸೈನ್ಯದ ಮುಖ್ಯ ಶಿಬಿರವು ಇಲ್ಲಿಯೆ ಊರುವಂತೆ ಆಜ್ಞಾಪಿಸಿದ್ದನು.

ಕಳೆದ ೧೦–೧೨ ದಿನಗಳಿಂದ ಈ ಊರಲ್ಲಿ ದಂಡಿನ ಚಟವಟಿಕೆಗಳು ವಿಶೇಷವಾಗಿ ನಡೆದಿದ್ದವು. ಸಮರ ಸಂದರ್ಭಗಳು ಮೇಲಿಂದ ಮೇಲೆ ಬರುತ್ತಿದ್ದುದರಿಂದ ಆಚರಸನು ತನ್ನ ರಾಜಧಾನಿಯಲ್ಲಿ ಹನ್ನೆರಡು ಸಾವಿರ ಸೇನೆಯನ್ನು ಯಾವಾಗಲೂ ಸಜ್ಜಾಗಿ ಇರಿಸುತ್ತಿದ್ದನು. ಇದೀಗಿನ ಈ ವಿಶೇಷ ಪ್ರಸಂಗದ ನಿಮಿತ್ತದಿಂದ ಇನ್ನೂ ಹದಿನೈದು ಸಾವಿರ ಪಡೆಯನ್ನೂ ತನ್ನ ಸೈನ್ಯಾಧಿಕಾರಿಗಳಿಗೆ ಅಪ್ಪಣೆ ಮಾಡಿದ್ದನು.

ಸೈನ್ಯಾಧಿಕಾರಿಗಳು ಎರಂಬರಗೆ, ನರೆಯಂಗಲ್, ಕೊಪ್ಪಣ, ರೋಣ ಮೊದಲಾದ ಊರುಗಳಲ್ಲಿ ತಾತ್ಪೂರ್ತಿಕ ಶಿಬಿರಗಳನ್ನು ಸ್ಥಾಪಿಸಿ ದಂಡು ಕೂಡಿಸುವ ಕೆಲಸವನ್ನು ಭರದಿಂದ ಮುಂದುವರಿಸಿದ್ದರು. ಈ ದಂಡಿನಲ್ಲಿ ನವಯುವಕರಂತೆ ಪಳಗಿದ ಯೋಧರೂ ನಿವೃತ್ತ ದಂಡಾಳುಗಳೂ ಬಂದು ಸೇರುತ್ತಿದ್ದರು. ನುರಿತ ಯೋಧರ ಮುಖಾಂತರ ನವಯುವಕರಿಗೆ ಸೈನಿಕ ಶಿಕ್ಷಣವನ್ನು ಕೊಡುವರು. ಹೀಗೆ ಶಿಕ್ಷಣ ಹೊಂದಿದವರನ್ನು ಕುಕ್ಕನೂರಿಗೆ ಕಳಹುವರು. ಇಲ್ಲಿ ದಂಡಿನ ಪ್ರಧಾನ ಕಾರ್ಯಾಲಯವಿದ್ದು ಅದರ ಎಲ್ಲ ವ್ಯವಸ್ಥೆಯನ್ನು ಆಚರಸನು ತನ್ನ ಹಿರಿಯ ದಂಡನಾಯಕನಿಗೆ ಒಪ್ಪಿಸಿದ್ದನು.

ಬಂದೂ ಹುರಿಯಾಳುಗಳಲ್ಲಿ ಆಯ್ಕೆ ಮಾಡುವುದು ; ಗಟ್ಟಿಗರು, ಬಂಟರು, ಆದವರಿಗೆ ದಂಡಯಾತ್ರೆಗೆ ಹೊರಡಲಿದ್ದ ಪಯಣ ಪಡೆಯಲ್ಲಿ ಎಡೆಕೊಡುವುದು ; ಬಲ್ಲವರನ್ನು ತಲೆಯಾಳಿ, ಹಿರಿಯಾಳಿ, ನಾಯಕ, ದಳವಾಯಿ, ದಲಪತಿ ಮೊದಲಾದ ಅಧಿಕಾರಕ್ಕೆ ನೇಮಿಸುವುದು ; ಹೊಸಬರನ್ನೂ ಸಾಧಾರಣರನ್ನೂ ನುರಿತವರ ಅಂಕಿತದಲ್ಲಿ ರಾಜ್ಯದ ರಕ್ಷಣೆಗೆ ಉಳಿದುಕೊಳ್ಳಲಿರುವ ಸಂರಕ್ಷಕ ಸೈನ್ಯದಲ್ಲಿ ಸೇರಲು ಎರಂಬರಗೆಗೆ ಕಳಹುವುದು ; ಮುಂತಾದ ಕಾರ್ಯಗಳು ಕಳೆದ ಒಂಬತ್ತು ದಿನಗಳಲ್ಲಿ ಇಲ್ಲಿ ಎಡೆಬಿಡದೆ ಸಾಗಿದ್ದುವು.

ಈ ದಂಡು ಕೂಡಿಸುವ ಕೆಲಸದಲ್ಲಿ ಪಡೆವಳ ಏಚಿಮಯ್ಯ, ಕುಪ್ಪದೇವ ಮೊದಲಾದವರು ಬಹುವಾಗಿ ಶ್ರಮಿಸುತ್ತಿದ್ದರು. ದಳವಾಯಿ ದುರಗಣ್ಣ ಈ ಕೆಲಸಕ್ಕೆ ಸೇರಿದಂದಿನಿಂದ ಅದು ಬಲವಾಗಿ ಮುಂದುವರಿಯಿತು. ಬೆಣ್ಣೆಕಲ್ ಅಡವಿಯಲ್ಲಿ ಪಡೆಗಳ ಏಚಿಮಯ್ಯ ನಾಯಕನು ಸೂಚಿಸಿದಂತೆ ಆತನು ಅಂದೇ ಎರಂಬರಗೆಗೆ ಹೋದನು. ಅಲ್ಲಿ ಆಚರಸನ ಆ ದೇಶವನ್ನು ಎತ್ತಿಕೊಂಡು ದಂಡು ಕೂಡಿಸಲಾರಂಭಿಸಿದನು. ದಿನವೊಂದಕ್ಕೆ ೨-೩ ಊರುಗಳಂತೆ ಸುಮಾರು ೨೦ ಊರುಗಳನ್ನು ಸಂಚರಿಸಿ ಕಳೆದ ಏಳು ದಿನಗಳಲ್ಲಿ ಮೂರು ಸಾವಿರ ಸೈನಿಕರನ್ನು ಆತನೊಬ್ಬನೇ ತಲೆಹಾಕಿದನು. ಆತನ ಯೋಗ್ಯತೆಯನ್ನು ಪೂರ್ಣವಾಗಿ ಅರಿತ ಆಚರಸನು ಕಲ್ಯಾಣದತ್ತ ಹೊರಡಲಿರುವ ಸೈನ್ಯದಲ್ಲಿ ಐದು ಸಾವಿರ ದಂಡಿನ ದಲಪತಿಯ ಅಧಿಕಾರಕ್ಕೆ ಆತನನ್ನು ನೇಮಿಸಿದನು.

ವ್ಯವಸ್ಥೆಯ ಸೌಕರ್ಯದ ಉದ್ದೇಶದಿಂದ ದಂಡಿನ ಶಿಬಿರಗಳನ್ನು ಎರಡು ಕಡೆಗೆ ಹಾಕಿದ್ದರು. ಒಂದು, ಊರು ಹೊರಗಣ ಉತ್ತರ ಭಾಗದ ಕೆಮ್ಮಣ್ಣು ಬಯಲಲ್ಲಿ, ರಾಜ, ರಾಜಪರಿವಾರ ಮತ್ತು ಮುಖ್ಯಾಧಿಕಾರಿಗಳ ಪಾಳ್ಯಗಳು ಇಲ್ಲಿ ವಿರಚಿತವಾಗಿದ್ದುವು. ಇತರ ದಂಡನಾಯಕ, ದಲಪತಿ ಮೊದಲಾದ ಸೇನಾಧಿಕಾರಿಗಳು ಊರ ಹೊರಗಣ ಪಶ್ಚಿಮ ಭಾಗದ ಮೂಲಸ್ಥಾನ ದೇವಾಲಯದ ನೆರೆಯಲ್ಲಿ ತಮ್ಮ ಬೀಡನ್ನು ಬಿಟ್ಟಿದ್ದರು.

ಆಚರಸನು ತಾನು ಕಲ್ಯಾಣ ರಾಜಧಾನಿಯತ್ತ ತೆರಳಿದ ಬಳಿಕ ತನ್ನ ಹಿಂದೆ ನಡೆಯಬೇಕಾದ ರಾಜ್ಯದ ವ್ಯವಸ್ಥೆಯನ್ನು ಮಾಡಿದನು. ಅಧಿಕಾರ

ಸೂತ್ರಗಳನ್ನು ಪ್ರಾಯಕ್ಕೆ ಬಂದಿದ್ದ ಯುವರಾಜ ಪೆರ್ಮಾಡಿಯ ಕೈಯಲ್ಲಿ ಸಿಕ್ಕಿಸಿ ಆತನ ಸಹಾಯಕ್ಕೆ ಅನುಭವಿಕರಾದ ಸಚಿವರನ್ನೂ ಸೇನಾನಾಯಕರನ್ನೂ ನಿಯೋಜಿಸಿದನು. ಅಗತ್ಯ ಕಂಡರೆ ತನಗೆ ಹೆಚ್ಚಿಗೆ ದಂಡನ್ನು ಕಳುಹುವ ಏರ್ಪಾಟು ಮಾಡಿದನು. ಇಂತು ವ್ಯವಸ್ಥೆಯನ್ನು ಮಾಡಿ ಒಮ್ಮೆ ಮುಂದಿಟ್ಟ ಅಡಿ ಹಿಂದೆಗೆಯಲಾಗದು ಎಂಬ ಸ್ಥಿರಸಂಕಲ್ಪದಿಂದ, ದೇವಿಯ ಮತ್ತು ಗುರುವಿನ ಸಂನಿಧಿಯಲ್ಲಿ ಸ್ವಲ್ಪ ಹೆಚ್ಚು ಕಾಲ ಕಳೆಯುವ ಉದ್ದೇಶವನ್ನು ಇಟ್ಟುಕೊಂಡು ಅಷ್ಟಮಿಯ ದಿನವೇ ರಾಜಧಾನಿಯಿಂದ ಹೊರಟು ರಾತ್ರಿಯ ಹೊತ್ತಿಗೆ ಕುಕ್ಕನೂರಿಗೆ ಬಂದು ಸೇರಿದನು.

* * * *

ವಿಜಯದಶಮಿಯ ನಿಮಿತ್ತ ನಡೆಯುತಕ್ಕ ದೇವಿಯ ಮಹಾಭಿಷೇಕ, ಹೋಮ, ಬಲಿ ಮೊದಲಾದ ವಿಧಾನಗಳು ಯಥಾವಿಧಿ ನೆರವೇರಿದುವು. ಊಟವಾದ ಬಳಿಕ ಮಾರನೆಯ ಜಾವದಲ್ಲಿ ಉತ್ಸವಕ್ಕಾಗಿ ಐತಂದ ನರನಾರಿಯರು ದೇವಿಯ ಸಂಮುಖದ ನವರಂಗದಲ್ಲಿ ನೆರೆದು ಗೀತ, ವಾದ್ಯ, ನೃತ್ಯ, ಸ್ತೋತ್ರಪಠನ, ವಿವಿಧ ಕಲಾವಿದ್ಯೆಗಳ ಪ್ರದರ್ಶನ ಮಾಡಿದರು. ಆ ಮೇಲೆ ಕೆಮ್ಮಣ್ಣು ಬಯಲಲ್ಲಿ ಸೈನ್ಯ ಸಂಚಲನೆ ಮತ್ತು ವ್ಯೂಹ ರಚನೆಯ ಕಾರ್ಯಕ್ರಮ ಮುಂದುವರಿಯಿತು. ಅದನ್ನು ನೋಡಲು ಊರಿಗೆ ಊರೇ ಹೊರಹೊರಟು ಗಜಿಬಿಜಿಗೊಂಡಿತು. ಒಂದುಡುಪನ್ನು ಧರಿಸಿ ಸಮಸ್ತಾಯುಧಗಳಿಂದ ಸುಸಜ್ಜಿತರಾದ ಸಾವಿರಾರು ಸೈನಿಕರು ಶಿಸ್ತಿನಿಂದ ಒಂದೆಡೆ ನೆರೆದು ಮುಂದು ಸಾಗುವುದು, ಕೂಡುವುದು, ಏಳುವುದು, ನುಸುಳುವುದು, ನುಗ್ಗುವುದು, ಏರಾಟವಾಡುವುದು, ಕಾಲಾಡುವುದು, ಮುತ್ತುವುದು, ನಾನಾ ಆಕಾರವಾಗಿ ಗುಂಪುಗಟ್ಟುವುದು, ಮೊದಲಾದ ಚಲನವಲನ ಮಾಡುವುದನ್ನು ನೋಡಿ ಜನಗಳು ಬೆರಗುಗೊಂಡರು. ಈ ದೃಶ್ಯವನ್ನು ನೋಡುತ್ತಿರುವಾಗ ಅನೇಕರಿಗೆ ಆಚರಸನ ಅಸಾಧಾರಣ ಶಕ್ತಿ ಪ್ರಭಾವಗಳು ಮನವರಿಕೆಯಾಗಿ, ಅವರು ಆತನ ಧೈರ್ಯ ಸಾಹಸಗಳನ್ನು ಮತ್ತೆ ಮತ್ತೆ ಎದೆ ಮುಟ್ಟಿ ಕೊಂಡಾಡಿದರು.

ಅಂದಿನ ಎಲ್ಲ ಕಾರ್ಯಕ್ರಮಗಳಲ್ಲಿ ಸಾಯಂಕಾಲದ ದೇವಿಯ ಸೀಮೋಲ್ಲಂಘನ ಸಮಾರಂಭವು ವಿಶೇಷ ವಿಜೃಂಭಣೆಯಿಂದ ಸೊಬಗು

ಗೊಂಡಿತು. ಚಿತ್ರ ವಿಚಿತ್ರವಾಗಿ ಸಿಂಗರಿಸಿದ ಚಿಕ್ಕರಥದಲ್ಲಿ ದೇವಿಯ ಚಿನ್ನ ರನ್ನದ ಉತ್ಸವ ಮೂರ್ತಿಯನ್ನು ಕೂರಿಸಿದ್ದರು ರಥದ ಇಕ್ಕೆಲದಲ್ಲಿ ಮಂಗಲ ವಾದಗಳು ಮೊಳಗುತ್ತಿದ್ದವು. ದೇವಿಯ ಬಲಪಕ್ಕದಲ್ಲಿ ಕೈಯಲ್ಲಿ ಚಾಮರ ವನ್ನು ಹಿಡಿದುಕೊಂಡ ಆಚರಸನು ಅದನ್ನು ಬೀಸುತ್ತ ರಥದ ಜೊತೆಗೆ ಮುಂದೆ ಸಾಗಿದ್ದನು. ತೇರಿನ ಒಂದು ಪಕ್ಕದಲ್ಲಿ ಮಂತ್ರಿ ಮೊದಲಾದ ಅಧಿ ಕಾರಿಗಳು, ಇನ್ನೊಂದು ಪಕ್ಕದಲ್ಲಿ ದೇವಾಲಯದ ಪಾರುಪತ್ಯಗಾರರು, ಆಚಾರ್ಯರು, ಮಹಾಜನರು, ಪಂಡಿತರು, ತಪೋಧನರು ಸಾಲುವಿಡಿದು ನಡೆಯುತ್ತಿದ್ದರು. ಪಟ್ಟಣ ಸೆಟ್ಟಿ, ಪಡ್ಡವ್ಯವಹಾರಿ ಮೊದಲಾದ ವರ್ತಕ ಪ್ರಮುಖರು ಮತ್ತು ನಾನಾ ಜಾತಿ ಜನಾಂಗದ ನಾಗರಿಕರು ಈ ಮೆರವಣಿಗೆ ಯಲ್ಲಿ ಪ್ರಾಮುಖ್ಯ ಭಾಗವಹಿಸಿದ್ದರು. ಈ ಸಮುದಾಯದಲ್ಲಿ ದೇವಿ ಯನ್ನು ಅನುಲಕ್ಷಿಸಿ ಮಂತ್ರ ಸೂತ್ರಗಳನ್ನು ಹೇಳುವವರು ಕೆಲರು ; ದಂಡಕ ಅಷ್ಟಕವೇ ಮೊದಲಾದ ಸ್ತೋತ್ರಗಳನ್ನು ಪಠಿಸುವವರು ಕೆಲರು; ಸಂಗೀತ ಮತ್ತು ಭಜನೆಯ ಮೇಳಗಳನ್ನು ನೈಗೂಡಿಸುವವರು ಕೆಲರು; ಕೀರ್ತನೆ ಗಳನ್ನು ತಾಳಲಯಬದ್ಧವಾಗಿ ಹಾಡುವವರು ಕೆಲರು ; ಕೋಲಾಟವಾಡು ವವರು ಕೆಲರು ; ವೀಣೆಯನ್ನು ನುಡಿಸುವವರು ಕೆಲರು.

ಮೆರವಣಿಗೆಯ ಮುಂದುಗಡೆ ಸಮವಸ್ತ್ರ ಧರಿಸಿದ, ಆಯುಧಪಾಣಿ ಗಳಾದ ದಂಡಾಳುಗಳು ರಣವಾದ್ಯಗಳ ಧ್ವನಿಯೊಂದಿಗೆ ಸಂಗ್ರಾಮ ಗೀತೆ ಗಳನ್ನು ಹಾಡುತ್ತ ಗತ್ತಿನ ಮೇಲೆ ಹೆಜ್ಜೆಯಿಕ್ಕುತ್ತ ಶಿಸ್ತಿನಿಂದ ಸಾಗಿದ್ದಿತು. ಈ ಪಡೆಯ ಸಂಮುಖದಲ್ಲಿ ಎತ್ತರೆತ್ತರವೂ ಭವ್ಯವೂ ಆದ ಧ್ವಜ-ಪತಾಕೆ ಗಳು, ಅನಂತ, ವಾಸುಕಿ ಮತ್ತು ತಕ್ಷಗರ ಆಕೃತಿಗಳಿಂದ ಚಿತ್ರಿತವಾದ ನಾಗಛತ್ರವು ಮತ್ತು ವ್ಯಾಘ್ರಲಾಂಛನವು ಶೋಭಿಸುತ್ತಿದ್ದುವು. ಇದಲ್ಲದೆ ನಾಗಸಿಂಹಾಸನ, ಚಮರೀಮೃಗದ ಚಾಮರಗಳು, ಉತ್ತಮಜಾತಿಯ ಭದ್ರ ಗಜಗಳು, ಮೊದಲಾದ ಬೇರೆ ರಾಜ ವೈಭವದ ವಸ್ತುಗಳು ಅಲ್ಲಿ ಪ್ರದರ್ಶಿತ ವಾಗಿದ್ದುವು. ಇವು ಸಿಂದವಂಶದ ಮತ್ತು ಆಚರಸನ ಮನೆತನದ ವಿಶಿಷ್ಟ ರಾಜ ಚಿಹ್ನೆಗಳಾಗಿದ್ದುವು.

ಈ ಉತ್ಸವವು ದೇವಾಲಯದಿಂದ ಹೊರಟು, ಪೇಟೆಯ ಮುಖ್ಯ ಬೀದಿಯ ಮಾರ್ಗವಾಗಿ ಮುಂದೆ ನಡೆದು, ಊರ ಹೊರಗೆ ಬಂದು ಮೂಳ

ಸ್ಥಾನ ಈಶ್ವರಗುಡಿಯ ಹತ್ತಿರಕ್ಕೆ ತಲುಪಿತು. ಅಲ್ಲಿಯ ವಿಸ್ತಾರವಾದ ಬನ್ನೀಕಟ್ಟೆಯ ಮೇಲೆ ದೇವಿಯನ್ನು ಸ್ಥಾಪಿಸಿ, ಶಮೀಪೂಜನ ಮತ್ತು ಶಮೀಗ್ರಹಣ ವಿಧಾನಗಳು ನಡೆದುವು. ಆ ಮೇಲೆ ದೇವಿಯು ಲೋಕೋಪದ್ರವಿಯಾದ ಶಂಬುಕ ಎಂಬ ಅಸುರನ ಮೇಲೆ ಏರಾಟಮಾಡಿ ಆತನನ್ನು ಸಂಹಾರಮಾಡಿದ ಸನ್ನಿವೇಶವನ್ನು ಅಭಿನಯಿಸಲಾಯಿತು.

ತರುವಾಯ ಅಂದಿನ ಸಮಾರಂಭದ ಒಂದು ವಿಶೇಷ ಸನ್ನಿವೇಶವಾದ ರಾಜಪ್ರಶಸ್ತಿ ಮುಂದುವರಿಯಿತು. ಬನ್ನೀಕಟ್ಟೆಯ ಮೇಲೆ ಶಮೀವೃಕ್ಷದ ನೆರೆಯಲ್ಲಿ ನಾಗಸಿಂಹಾಸನವನ್ನು ಸ್ಥಾಪಿಸಿ, ಅದರ ಮೇಲೆ ಸತ್ಕಾರಪೂರ್ವಕವಾಗಿ ಆ ಅರಸನನ್ನು ಕೂರಿಸಿದರು. ಆತನ ತಲೆಯ ಮೇಲೆ ನಾಗಛತ್ರವು ಒಪ್ಪುತ್ತಿತ್ತು. ಪಕ್ಕದಲ್ಲಿ ನಾಗಧ್ವಜವೂ ವ್ಯಾಘಲಾಂಛನವುಳ್ಳ ಪತಾಕೆಯೂ ಚಾಮರಾದಿ ರಾಜಚಿನ್ಹಗಳೂ ರಾರಾಜಿಸುತ್ತಿದ್ದುವು. ರಾಜಪುರೋಹಿತರು ಮುಂದೆ ಬಂದು ನಿಂತರು. ಅರಸನಿಗೆ ಮಂಗಳವನ್ನು ಕೋರುತ್ತ, ಆತನ ಬಿರುದಾವಳಿ, ವಂಶಾವತಾರ ಮೊದಲಾದ ವಿಷಯಗಳನ್ನು ಅಸ್ಖಲಿತ, ಪ್ರಸ್ಫುಟವಾಣಿಯಿಂದ ಪ್ರಾಸಬದ್ಧಶೈಲಿಯಲ್ಲಿ ನಿವೇದಿಸಲಾರಂಭಿಸಿದರು :

ಜಯತಿ ವಿಜಯಲಕ್ಷ್ಮೀನರ್ತಕೀ ನಾಟ್ಯರಂಗೋ
ವಿಜಿತ ಸಮರರಂಗೋ ವೈರಿದೋರ್ದರ್ಪಭಂಗಃ ।
ವಿತರಣಗುಣತುಂಗೋ ವಿಶ್ವವಿದ್ಯಾಂತರಂಗೋ
ವಿವಿಧ ವಿಬುಧಸಂಗಃ ಸಾಹಸೋತ್ತುಂಗಸಂಗಃ ॥

ಸ್ವಸ್ತಿ ॥ ಸಮಧಿಗತ ಪಂಚಮಹಾಶಬ್ದರು, ಮಹಾಮಂಡಲೇಶ್ವರರು, ಉದಾರವೀರ ಲಕ್ಷ್ಮೀಶ್ವರರು, ಸಿಂದಕುಳಕಮಳ ಮಾರ್ತಂಡರು, ಮಂಡಳಿತ ಕುಸುಮ ಕೋದಂಡರು, ಸೂಕಳಹಯಾರೂಢರು, ಪೌಢಶಿಕ್ಷಾ ವಿಚಕ್ಷಣರು, ಪರಿಪೂರ್ಣ ಶುಭಲಕ್ಷಣರು, ಕವಿಗಮಕಿವಾದಿ ವಾಗ್ಮಿಜನ ಸಂಸ್ತೂಯಮಾನರು, ಗುಣಗಣ ನಿಧಾನರು, ಶಿವಾಗಮ ಸಮಾಕರ್ಣನ ಕರ್ಣಪೂರರು, ಸಕಳ ವಿದ್ವಜ್ಜನಾಧಾರರು, ಅಪಾರ ಪರಹಿತಾಚಾರ್ಯರು, ಅಸಹಾಯಾಚಾರ್ಯರು, ನಾನಾನಯೋಪಾಯ ನಿಪುಣಚಾಣಕ್ಯರು, ಅಚಳಿತವಾಕ್ಯರು, ಶಸ್ತ್ರಶಾಸ್ತ್ರಾದಿ ಸತ್ಕಳಾ ಪ್ರವೀಣರು, ರಣಾಂಗಣಧುರೀಣರು, ಭೋಗೋಪಭೋಗ ಸಂಕ್ರಂದನರು, ಅನೂನದಾನರವಿ ನಂದನರು, ಅನೇಕ ವಿಧದುರ್ಗ

ವರ್ಗ ತ್ರಿಣೇತ್ರರು, ಆದಿರಾಜ ಚರಿತ್ರರು, ಶರಣಾಗತ ವಜ್ರಪಂಜರರು, ಚಾಳುಕ್ಯಕುಲಕ್ಕೆ ಭಕ್ತರು, ಅತ್ಯಂತ ವಿಶ್ರಾಂತಲೀಲಾ ಚಾತುರ್ಯರು, ಕದನೈಕಧುರ್ಯರು, ಭೋಗಾವತೀ ಪುರವೇಶ್ವರರು, ನಾಗಕೇತನರು, ವ್ಯಾಘ್ರಲಾಂಛನರು, ಇತ್ಯಾದಿ ನಾಮಾವಳೀ ವಿರಾಜಿತರು, ಸಮಸ್ತ ಪ್ರಶಸ್ತಿ ಸಹಿತರು, ಸಿಂಗರಸರ ಸತ್ಪುತ್ರರು ಆದ ಶ್ರೀಮಾನ್ ಆಚರಸ ಮಹಾರಾಜರು ಕಿಸುಕಾಡು, ಬೆಳ್ವಲನಾಡಿನ ಪ್ರದೇಶದ ರಾಜ್ಯವನ್ನು ಎರಂಬರಾಪುರ ರಾಜಧಾನಿಯಿಂದ ಸುಖಸಂಕಥಾ ವಿನೋದಪೂರ್ವಕವಾಗಿ ದುಷ್ಟನಿಗ್ರಹ ಶಿಷ್ಟ ಪರಿಪಾಲನದೊಂದಿಗೆ ಆಳುತ್ತಿರುವರು. ಇವರು ಅಗ್ನಿಕುಲದವರು, ನಾಗ ವಂಶೀಯರು. ಇವರ ವಂಶದ ಮೂಲ ವೃತ್ತಾಂತವು ರೋಮಾಂಚಕರ ವಾಗಿದೆ. ಅದು ಹೇಗೆಂದರೆ :

ಹಿಂದೆ ಒಂದಾನೊಂದು ಕಾಲದಲ್ಲಿ ಪಾತಾಳದ ಅಧಿಪತಿಯಾದ ನಾಗರಾಜ ಧರಣೇಂದ್ರನು ಭೂಲೋಕದ ಸೊಬಗನ್ನು ನೋಡಲೆಳಸಿ ಇಲ್ಲಿಗೆ ಬಂದು, ಅಲ್ಲಲ್ಲಿ ಸಂಚಾರ ಮಾಡುತ್ತ, ಸಿಂಧು ನದಿಯ ಪ್ರದೇಶದಲ್ಲಿ ಇರುವಂತಹ ಅಹಿಚ್ಛತ್ರ ಎಂಬ ನಗರಿಗೆ ಪಯಣ ಬೆಳಸಿದನು. ಅಲ್ಲಿ ತಿರುಗುತ್ತ ಒಂದು ರುದ್ರಶಿವಾಲಯವನ್ನು ಕಂಡು ಒಳಗೆ ಪ್ರವೇಶಿಸಿದನು. ಆ ರುದ್ರಶಿವ ವಿಗ್ರಹದ ಕೈಯಲ್ಲಿ ತೆಳುವಾದ ಬಿಚ್ಚುಗತ್ತಿಯೊಂದು ಹೊಳೆಯುತ್ತಿದ್ದಿತು. ಅದನ್ನು ನೋಡಿ, ಈಶ್ವರನ ಮಾಯೆಯಿಂದಾಗಿ ನಾಗರಾಜನಿಗೆ ಮನೋಭ್ರಮೆ ಉಂಟಾಯಿತು. ನಾಗಿಣಿಯೆಂದು ಮೋಹಿಸಿ ವಿಷಯವಾಸನೆಯಿಂದ ಆತನು ಅದನ್ನು ಅಪ್ಪಿಕೊಂಡನು. ಕೂಡಲೆ ಆ ಸಮಾಗಮದಿಂದ ತೇಜಸ್ವಿ, ಮಹಾಬಾಹು, ಕುಮಾರನೊಬ್ಬನು ಜನಿಸಿದನು. ಆ ಶಿಶುವನ್ನು ಆಲಿಸಿ ಆನಂದಿತರಾದ ಶಂಕರರು ತಮ್ಮ ಇಚ್ಛಾ ಮಾತ್ರದಿಂದ ಒಂದು ಹುಲಿಯನ್ನು ಹುಟ್ಟಿಸಿ ಅದರ ಹಾಲಿನಿಂದ ಆ ಕುಮಾರನ ಪೋಷಣೆಯಾಗುವಂತೆ ಆಜ್ಞಾಪಿಸಿದರು. ಶುಕ್ಲಪಕ್ಷದ ಚಂದ್ರಮನಂತೆ ಈ ಬಾಲಕನು ವೃದ್ಧಿಂಗತನಾಗಿ ಅತಿ ಪ್ರತಾಪಶಾಲಿ ಮಹಾವೀರನೆಂದು ಲೋಕದಲ್ಲಿ ವಿಖ್ಯಾತನಾದನು. ಸಿಂದ, ನಿಡುತೋಳಸಿಂದ, ಪುಲಿಕಾಲ ಎಂಬ ಅನ್ವರ್ಥಕ ಹೆಸರುಗಳು ಈತನಿಗೆ ಪ್ರಾಪ್ತವಾದುವು. ಈತನೇ ಸಿಂದವಂಶದ ಮೂಲ ಪುರುಷನು.

ಸಿಂಧು ದೇಶಕ್ಕೆ ಒಡೆಯನಾದ ಈತನು ಮುಂದೆ ಕರಹಾಟ ಪ್ರಾಂತ್ಯಕ್ಕೆ ಬಂದನು. ಕದಂಬ ರಾಜಕನ್ಯೆಯನ್ನು ಪಾಣಿಗ್ರಹಣ ಮಾಡಿ ಅಲ್ಲಿಯೆ ಇದ್ದು ರಾಜ್ಯವಾಳ ತೊಡಗಿದನು. ತರುವಾಯ ಈತನ ವಂಶದಲ್ಲಿ ಅನೇಕ ಅರಸರು ಉದಯಿಸಿದರು. ಅವರಲ್ಲಿ ಒಬ್ಬನು ಬಾಗಡಿಗೆ * ನಾಡಿಗೆ ಬಂದನು. ಆತನ ವಂಶಸ್ಥರನೇಕರು ಅಲ್ಲಿ ಆಳಿದ ಬಳಿಕ, ರಾಜಪುತ್ರನೊಬ್ಬನು ಅಲ್ಲಿಂದ ಎರಂಬರಾಪುರಕ್ಕೆ ಆಗಮಿಸಿದನು. ಇಲ್ಲಿ ರಾಜ್ಯವನ್ನು ಸ್ಥಾಪಿಸಿ ವಂಶವನ್ನು ವಿಸ್ತಾರಗೊಳಿಸಿದನು. ಈ ವಂಶವೇ ನಮ್ಮ ಮಹಾರಾಜರ ಘನವಾದ ವಂಶ.

ಇಂತಿರುವ ಶ್ರೀವರ್ಮಾ ಆಚರಸ ಮಹಾರಾಜರವರಿಗೆ ಶ್ರೀ ದೇವಿ ಆಯುರಾರೋಗ್ಯ, ಶಕ್ತಿ, ಭುಕ್ತಿ, ಕೀರ್ತಿ, ಸಕಲ ಸುಖ ಸನ್ಮಂಗಳಗಳನ್ನು ಚಿರಕಾಲ ದಯಪಾಲಿಸಲಿ. ಅವರು ಸರ್ವಕಾಲ ಸಮಸ್ತ ಕಾರ್ಯಗಳಲ್ಲಿ ಜಯಶೀಲರಾಗಲಿ. ಇಂದಿನ ವಿಜಯದಶಮಿ ಅವರಿಗೆ ಸಂಪೂರ್ಣ ವಿಜಯಪ್ರದವಾಗಲಿ.

ವಿಸ್ಮಯಚಿತ್ತದಿಂದ ರಾಜಪುರೋಹಿತರ ಭಾಷಣವನ್ನು ಕೇಳುತ್ತಿದ್ದ ಜನಗಳು ಅಧಿಕವಾದ ಭಯ ಭಕ್ತಿಯಿಂದ ಸಿಂಹಾಸನದ ಮೇಲೆ ಕುಳಿತ ಆಕೃತಿಯ ಕಡೆಗೆ ನೋಡತೊಡಗಿದರು. ಆಗ ಅವರಿಗೆ ಅಲ್ಲಿ ದಿವ್ಯವಾದ ತೇಜೋ ವಿಶೇಷದಿಂದ ಪ್ರಕಾಶಮಾನವಾದ ರಾಜಬಿಂಬವೊಂದು ಕಂಗೊಳಿಸಿತು. ನಾಗಛತ್ರವು ಮಾಯವಾಗಿ ಅದರ ಸ್ಥಳದಲ್ಲಿ ನಾಗರಾಜನೇ ಪ್ರತ್ಯಕ್ಷವಾಗಿ ಬಂದು ತನ್ನೀ ನಾಮಾಂಕಿತ ವಂಶ ಜನರ ಮೇಲೆ ತನ್ನ ಕೃಪಾಛತ್ರವನ್ನು ಹರಹಿದಂತೆ ಭಾಸವಾಯಿತು!

ರಾಜ ಪುರೋಹಿತರ ಉಪನ್ಯಾಸವು ಮುಗಿಯಲು, ಅದರ ಕೊನೆಯ ಮಾತಿನಲ್ಲಿಯ ಹಾರಯಿಕೆಗಳಿಗೆ ದನಿಗೂಡಿಸುತ್ತ ಜನರು, 'ಆಗಲಿ', 'ಆಗಲಿ', 'ಮಹಾರಾಜರಿಗೆ ಜಯವಾಗಲಿ' ಎಂದು ಏಕಕಂಠದಿಂದ ಕೂಗಿ ಗರ್ಜನೆ ಮಾಡಿದರು.

ಅನಂತರ ದೇವಿ ಸ್ವಸ್ಥಾನಕ್ಕೆ ಮರಳಿದಳು. ಆಕೆಯನ್ನು ಅನುಸರಿಸಿ ಎಲ್ಲರು ಗುಡಿಗೆ ಬಂದರು. ಬಳಿಕ, ಬಂಧು ಬಳಗದವರಿಗೆ ಬಂಗಾರವೆಂದು ಬನ್ನಿಯ ಎಲೆಯನ್ನು ಕೊಡುಕೊಳ್ಳುವ ಸಂಪ್ರದಾಯ ಕ್ರಮವು ಸರಾಗವಾಗಿ ಸಾಗಿತು.

---

*ಇಂದಿನ ಬಾಗಲಕೋಟಿ.

## ಕಿರಣ ನಾಲ್ಕು

# ವಿರಹಿಣಿ

"ನಾಗಿಣೀ, ಹೇಳೇ ನೀನು; ಇಂದು ಎಷ್ಟು ಹೊತ್ತಾಯಿತ್ತಲ್ಲ. ಕಾದು ಕಾದು ಬೇಸತ್ತೆನು; ಇರುಳು ಸುಗ್ಗುತ್ತಲಿದೆ. ಇದುವರೆಗೂ ನಾಥರ ಆಗಮನವಿಲ್ಲ! ಅದೆಂತಹ ಘನವಾದ ಕೆಲಸವೋ ಹೃದಯೇಶ್ವರರಿಗೆ? ಯಾವಾಗ ಬರುವರು ಹೇಳೇ ನಾಗೂ, ನನ್ನ ಮೋಹದಮಣಿ!"

ಈ ಶಬ್ದಗಳು ನಾಗಿಣಿಯ ಕಿವಿಗೆ ತಲುಪಿದುವೋ, ಇಲ್ಲವೋ? ಏಕೋ, ಅವಳು ನಿತ್ಯದಂತೆ ಉತ್ಸಾಹವನ್ನು ತೋರದೆ ಉದಾಸೀನವನ್ನು ಬೀರುತ್ತ ಬೆಳ್ಳಿಯ ಆಸನದ ಮೇಲೆ ಸುಮ್ಮನೆ ನಿಂತುಬಿಟ್ಟಳು. "ಹೇಳೇ ನಾಗಿಣೀ, ನನ್ನ ಮೋಹದ ಮಣಿ" ಎಂದು ಇನ್ನೊಂದು ಬಾರಿ ಕೇಳಿದುದಕ್ಕೆ ಇನ್ನಿಷ್ಟು ಅಸ್ವಸ್ಥಳಾದಂತೆ ಕಾಣಿಸಿಕೊಂಡಳು. ಮೂಗನ್ನು ಮೇಲಕ್ಕೆ ಮಾಡಿ ಬಲಗಾಲನ್ನು ಎತ್ತಿ, ಎಡಪಕ್ಕಕ್ಕೆ ಜೋತುಕೊಂಡು ಕೆಂಪಾದ ಕಣ್ಣು ಗುಡ್ಡೆಗಳನ್ನು ದುರದುರನೆ ತಿರುಹಲಾರಂಭಿಸಿದಳು. ಇದನ್ನು ನೋಡಿ ವಿರಹಿಣಿಗೆ ನಿರಾಸೆ ಆಯಿತು. ಆಕೆ ಮತ್ತೊಂದು ಮಗ್ಗುಲಿಗೆ ತಿರುಗಿ ದನಿಯನ್ನು ಮಾರ್ಪಡಿಸಿ ಸಂಬೋಧಿಸಿದಳು: "ರಾಗಿಣೀ, ನೀನಾದರೂ ಹೇಳೆ; ವಲ್ಲಭರು ಯಾವಾಗ ಬರುವರು? ಇಂದು ಭೋಗಿ; ನಾಳೆ ತಾನೆ ನರಕ ಚತುರ್ದಶಿ. ದೀಪಾವಳಿಯ ಹಬ್ಬವೆಂದರೆ ಕಾಂತರಿಗೆ ಎಷ್ಟು ಸಂತೋಷ! ಮಬ್ಬುಗತ್ತಲೆ ಆಯಿತು; ಇನ್ನೂ ಅವರ ದರ್ಶನವಿಲ್ಲ. ಎಷ್ಟು ಕೆಲಸಗಳಿದ್ದರೂ ಬೇಗ ಮುಗಿಸಿ ಇಲ್ಲಿಗೆ ಓಡಿ ಬರುವರು. ಅದೇನು ಕೆಲಸವೋ ಇಂದು! ಪಶುಪತಿ ಪ್ರಾಣಪದಕರ ಹೊರೆಯನ್ನು ಹಗುರುಮಾಡಲಿ. ರಾಗಿಣೀ, ಹೇಳೆ ಯಾವಾಗ ಬರುವರು, ನನ್ನ ಮುದ್ದಿನ ಕಣಿ?"

ಈ ಮಾತುಗಳನ್ನು ಕೇಳಿ ಆಳವಾದ ಆಲೋಚನೆಯಲ್ಲಿ ಮುಳುಗಿದಂತೆ ತೋರಿದಳು ರಾಗಿಣಿ. ತುದಿಗಾಲ ಮೇಲೆ ನಿಂತು ಮೈಯನ್ನು ಬೀಗಿಸಿ ಗೋಣನ್ನು ಮುಂದಕ್ಕೆ ಬಾಚಿದಳು. ಕುಣ್ಣುಗುಂಡಿಗಳನ್ನು ಗುಂಡಿನಂತೆ ಗಂಟಿಕ್ಕಿ ಮೂಗನ್ನು ಎಳೆಯುತ್ತ ಬಾಯ ತೆರೆದು ಮೆಲ್ಲನೆ ನುಡಿದಳು:

"ಬ-ರ್‍ರ್ರಿ-ವ್ವಾ-ರ್! "

"ಗಯ್ಯಾಳೀ, ಇಷ್ಟು ಹೇಳಲಿಕ್ಕೆ ನೀನೇಕೆ ಬೇಕೆ, ಚದುರೆ? 'ಬ-ರ್‍ರ್ರಿ-ವ್ವಾ-ರ್!' ಅಂತೆ. ಸಂಚಾರಕ್ಕೆ ಹೋಗಿಲ್ಲ, ಊರಲ್ಲಿಯೇ ಇದ್ದಾರೆ. ಬಂದೇ ಬರುವರು. ಅದನ್ನು ನೀನೇನು ಹೇಳುವುದು, ಸಟವೀ? ಇವಳ ಕಣ್ಣು ನೋಡಿರಿ; ಕಾಲ ಲಕ್ಷಿಸಿರಿ; ಮೈಯನ್ನು ಹೇಗೆ ಸೆಟಿಸಿದ್ದಾಳೆ, ಬಾಯನ್ನು ಹೇಗೆ ತೆಗೆದಿದ್ದಾಳೆ! ಎಲೆ ಒಯ್ಯಾರಿ, ಬಿಂಕವೆಷ್ಟೇ ನಿನಗೆ?"

"ಬ-ರ್‍ರ್ರಿ-ವ್ವಾ-ರ್!" ಅದೇ ಭಂಗಿಯಲ್ಲಿ ಮತ್ತೆ ನುಡಿದಳು.

"ಸಾಕೇ ರಾಗೂ, ನಿನ್ನ ಸೋಗು. ನೀವು ಇಬ್ಬರೂ ವಿಶ್ವಾಸಘಾತಕಿಯರು; ನಿಮ್ಮ ಸಹವಾಸವೇ ಬೇಡ ನನಗೆ. ಬಗೆ ತುಂಬಿ ಬಂದ ಇಂತಹ ಸಮಯಲ್ಲಿ ನನ್ನನ್ನು ನಿರಾಸೆಗೊಳಿಸಿದುದಕ್ಕೆ ನಿಮ್ಮಿಬ್ಬರಿಗೂ ಗಡಿಪಾರು ಶಿಕ್ಷೆ. ಹೋಗಿರಿ ಹೊಯ್ಮಾಲೆಯರೆ, ನನ್ನ ಕಣ್ಮರೆಯಾಗಿರಿ. ನಾಗಿಣಿ ತಿಳಿಯಿತೇ ನಿನಗೆ? ಏನೇ ರಂಭೇ, ಅದಾವ ನರ್ತನ ಶೈಲಿಯೇ ನಿನ್ನದು? ನೃತ್ಯಾಚಾರ್ಯರು ಬಂದು ಕಲಿಸುತ್ತಾ ನಿಂತಿದ್ದಾರೆಯೇ ನಿನ್ನ ಬಳಿ? ರಾಗಿಣೀ, ನೀನಾದರೂ ಅಂತಹಳೇ. ನಿಮ್ಮಿಬ್ಬರಿಗೂ ತಕ್ಕ ಶಾಸನವಾಗಲೇ ಬೇಕು. ಯಾರವರು ಅಲ್ಲಿ?"

ಅಲ್ಲಿ ಯಾರು ಇರಲಿಲ್ಲ. ವಿಧಿಸಿದ ದಂಡನೆ ಅನುಷ್ಠಾನಕ್ಕೆ ಬಾರದುದಕ್ಕೆ ಮತ್ತಿಷ್ಟು ಸಂತಪ್ತಳಾದ ವಿರಹಿಣಿ ದುಸುಮುಸು ಗುಟ್ಟುತ್ತಾ ಬಂದು ಆಸನದ ಮೇಲೆ ಕಣ್ಣು ಮುಚ್ಚಿಕೊಂಡು ಬಿದ್ದುಬಿಟ್ಟಳು. ಐದು ನಿಮಿಷಗಳು ನೀರವವಾಗಿ ಉರುಳಿದುವು. ವಿರಹಿಣಿಯ ಕಾತರತೆ ಹೆಚ್ಚಿತು. ಮನಸ್ಸಿನ ಅಸ್ವಸ್ಥತೆ ಮೊನೆಗಂಡಿತು. ಇನ್ನು ಆಸನದಿಂದ ಏಳಬೇಕು ಎನ್ನುವಷ್ಟರಲ್ಲಿ ಹಿಂಬದಿಯಿಂದ ಎರಡು ವಿಧವಾಗಿ ಇಬ್ಬರ ದನಿ ಎಂಬಂತೆ ಈ ಪರಿಯ ಮಾತುಗಳು ಕೇಳಿಸಿದವು.

"ಮುನಿದು ಕೊಳ್ಳಬೇಡ, ಪ್ರಿಯೆ!"

"ಅವ್ವಯ್ಯ, ಬಂದೇ ಬಿಟ್ಟರಲ್ಲ!"

ಈ ಮಾತುಗಳನ್ನು ಕೇಳಿ ವಿರಹಿಣಿ ದಿಗ್ಗನೆ ಎದ್ದುನಿಂತಳು, ಕಣ್ಣರಳಿಸಿ ಬಾಗಿಲ ಕಡೆಗೆ ನಿಟ್ಟಿಸಿದಳು; ಯಾರೂ ಇರಲಿಲ್ಲ. ದಿಗಿಲುಗೊಂಡಳು.

ಅತ್ತಿತ್ತ ಹುಡುಕಾಡಲಾರಂಭಿಸಿದಳು. ಆ ಪ್ರಯತ್ನವು ಹುಸಿಯಾಗಲು ಹೆಚ್ಚಿನ ನಿರಾಸೆಯಿಂದ ಸೋತವಳಾಗಿ ಏನೇನನೋ ಆಲೋಚಿಸುತ್ತ ಮೊದಲಿನ ಆಸನದ ಮೇಲೆ ಮತ್ತೆ ಬಿದ್ದು ಬಿಟ್ಟಳು. ಒಂದೆರಡು ನಿಮಿಷಗಳು ಕಳೆಯು ವಷ್ಟರಲ್ಲಿ 'ಹಃ-ಹಃ-ಹಾಃ' ಎಂಬ ಪರಿಹಾಸದ ಅಟ್ಟಹಾಸವು ಹಿಂದಿನಿಂದ ಸಿಡಿದು ಬಂದು ಆಕೆಯ ಕಿವಿಯಲ್ಲಿ ನಟ್ಟು ಎದೆಯನ್ನು ಗಾಯಗೊಳಿಸಿತು. ಕನಲಿಕೆಯಿಂದ ಎದ್ದು ನಿಂತು, ಆ ಶಬ್ದವು ಎಲ್ಲಿಂದ ಬಂದಿರಬಹುದು ಎಂಬುದನ್ನು ನಿಷ್ಕರ್ಷಿಸಿ ದೃಢನಿರ್ಧಾರದಿಂದ ಆ ಕಡೆ ಹೊರಟಳು. ಒಂದೆರಡು ಎಡೆಯಲ್ಲಿಯ ಪ್ರಯತ್ನವು ಫಲಿಸಲಿಲ್ಲ. ಕೊನೆಗೆ ತನ್ನ ಆಭರಣಗಳ ಹಿರಿಯ ಕಪಾಟಿನ ಕೆಳಗೆ ಯಾವುದೋ ಒಂದು ಪ್ರಾಣಿ ಹುದುಗಿಕೊಂಡಿದೆ ಎಂದು ಅದರ ಹೊಳೆವ ಕಣ್ಣುಗಳಿಂದ ಕಂಡುಹಿಡಿದಳು. ಹಿಗ್ಗಿನಿಂದ ಹತ್ತಿರಕ್ಕೆ ಹೋದಳು. ಎಡಗೈಯಿಂದ ಅದರ ಜುಟ್ಟನ್ನು ಹಿಡಿದು ಎಳೆದಳು. ಬಲಗೈ ಯಿಂದ ಗುದ್ದುಗಳನ್ನು ನೀಡುತ್ತ ಜಯಶಾಲಿಯಾದ ಕ್ರೋಧದ ಫೂತ್ಕಾರ ಗಳನ್ನು ಬೀರುತ್ತ ಕಿರಚಿದಳು :

"ಎಲ್ಲವೋ ಮಾರೀಚಾ! ಸಿಕ್ಕುಬಿಟ್ಟೆಯಲ್ಲ ಕೊನೆಗೆ. ನನ್ನ ಅಂತಃಪುರಕ್ಕೆ ಬಂದು ನನ್ನೊಡನೆ ಈ ಚೇಷ್ಟೆಯೇ? ವಿನೋದ-ಪರಿಹಾಸಕ್ಕೂ ಒಂದು ಹೊತ್ತು, ವೇಳೆ, ಮರ್ಯಾದೆ ಎಂಬುದು ಇಲ್ಲವೇ? ರಾಜೇಶ್ವರರ ಸಲುಗೆ ಯಿಂದ ಮೀರಿ ಬಿಟ್ಟಿದ್ದೀಯೆ. ಇದೀಗ ಬರಲಿ ಅವರು. ಅನ್ನ ನೀರು ಇಲ್ಲದೆ ಎಂಟು ದಿನ ಕತ್ತಲೆ ಕೋಣೆಯಲ್ಲಿ ಕೊಳೆಹಾಕಿಸುವೆ ನಿನ್ನನ್ನು. ನೋಡಿ ದೆಯಾ ನನ್ನನ್ನು ಮೀರಿ ನಡೆದ ಆ ನಾಗಿಣಿ-ರಾಗಿಣಿಯರ ಅವಸ್ಥೆ ಏನಾಗಿದೆ!"

"ಏನಾಗಿದೆ ರಾಣಿ, ಬಲು ಚೆನ್ನು ಆಗಿದೆ. ಬೆಳ್ಳಿಯ ಕಂಬಿಯ ಮೇಲೆ ಕುಳಿತು, ಚಿನ್ನದ ತಟ್ಟೆಯಲ್ಲಿಯ ಹಣ್ಣುಗಳನ್ನು ಮೆಲ್ಲುತ್ತ, ರನ್ನದ ಕನ್ನಡಿ ಯಲ್ಲಿ ರೂಪವನ್ನು ನೋಡಿಕೊಳ್ಳುತ್ತ ಸೊಗಸಾಗಿ ಮೆರೆಯುತ್ತಾ ಇದ್ದಾರೆ." ಗುದ್ದುಗಳನ್ನು ತಿನ್ನುತ್ತಿದ್ದ ಪ್ರಾಣಿ ಕವಡುದನಿಯಿಂದ ಮಾತನಾಡಿತು.

"ಇದೀಗ ನೋಡುವೆಯಂತೆ ಅವರ ಮೆರವಣಿಗೆಯನ್ನು. ಎಲಾ ವಾತಾಪೀ, ಎಷ್ಟು ಧಾರ್ಷ್ಟ್ಯವೋ ನಿನಗೆ! ನನಗೂ ಮಾರುತ್ತರ ಕೊಡುವೆ?

ಇದೆಲ್ಲವು ಅವರ ಇಚ್ಛೆ. ಇದೀಗ ಬರಲಿ; ಹೇಳಿ ಬಿಡುವೆ ರಾಜೇಶ್ವರರಿಗೆ ನನ್ನ ಅಂತಃಪುರದಲ್ಲಿ ಸರ್ವಥಾ ಬೇಡ ಈ ಪಿಶಾಚಿಯು ಸಂಚಾರವೆಂದು. ಅರಮನೆಯಲ್ಲಿ ಮಿಕ್ಕೆಡೆ ಬೇಕಾದಲ್ಲಿ ಬೇಕಾದಷ್ಟು ಅಂಡಲೆಯಲಿ ಈ ಭೂತ. ನನ್ನ ಮನೆಯಲ್ಲಿ ಮಾತ್ರ ಇದರ ಗಾಳಿಯೂ ಬೇಡ. ಇದುವೇ ನನ್ನ ಕಟ್ಟಾಣತಿ. ಬರಲಿ ಇದೀಗ ರಾಜೇಶ್ವರರು. ”

ಈ ಹೊತ್ತಿಗೆ, ಮೊದಲು ವಿರಹಿಣಿಯಾಗಿ ಬಳಿಕ ರಾಣಿಯೆಂದು ಸಂಬೋಧಿತಳಾದವಳು ಆ ಪ್ರಾಣಿಯನ್ನು ತನ್ನ ಆಸನದ ಹತ್ತಿರಕ್ಕೆ ಎಳೆದು ತಂದು ಬಿಟ್ಟು ಬಿಟ್ಟಳು. ತಾನು ಆಸನದಲ್ಲಿ ಕುಳಿತುಕೊಂಡಳು. ಬಿಡುಗಡೆ ಹೊಂದಿದ ಆ ಪ್ರಾಣಿ 'ಬದುಕೆಲೆ ಜೀವ' ಎಂದು ಅಂದುಕೊಂಡು ಏದುತ್ತ, ತೇಕುತ್ತ, ಪಟಪಟನೆ ರೆಪ್ಪೆಗಳನ್ನು ಬಡಿಯುತ್ತ ಮೋರೆಯನ್ನು ಒಂದು ಮಗ್ಗುಲಿಗೆ ತಿರುಗಿಸಿ ನಿಂತುಕೊಂಡಿತು. ನಸು ಉಸಿರು ಆರಿಸಿಕೊಂಡು ಕೃತ್ರಿಮದ ಮೊನೆ ನುಡಿಯಿಂದ ಮಾತುಗಳನ್ನು ಆರಂಭಿಸಿತು :

"ಭೋ ಏಕಚ್ಛತ್ರಾಧಿಕಾರವೇ ನಿನಗೆ ನಮಃ, ಓಹೋ! ಅಗ್ರಮಹಿಷಿ—ಪಿರಿಯರಸಿಯರಲ್ಲವೇ ತಾವು ? ಕ್ಷಮಿಸು ಸಮ್ರಾಜ್ಞೀ ಆದರೆ—ಆದರೇ—”

"ಆದರೆ—ಆದರೆ—ಏನು ? ”

"ಬೇಡ, ಬೇಡ, ದೇವೀ. ಆ ಸಮಾಚಾರ ತಮ್ಮ ಕಿವಿಗೆ ಬೀಳದಿರುವುದೇ ಲೇಸು. ”

ಅಂಬು ಇಷ್ಟು ಬೇಗ ನೇರವಾಗಿ ಗುರಿಯನ್ನು ಸಾಧಿಸಿ ಮರ್ಮವನ್ನು ಭೇದಿಸಿತು. ಆ ನೋವಿನಿಂದ ಗಾಸಿಯಾದ ದೇವಿ ಕರಗಿ ಮೆದುವಾಗಿ ಸಲುಗೆಯ ಸಲ್ಲಾಪದ ಸೆಳವಿಗೆ ಸಿಲುಕಿದಳು :

"ಯಾವ ಸಮಾಚಾರ ? ಹೇಳಿ ಬಿಡಯ್ಯ. ”

"ಊಂ ಹೂಂ ; ಆಗದು. ರಾಜೇಶ್ವರರ ಕಟ್ಟಾಣತಿಯಿದೆ ಹೇಳಬೇಡವೆಂದು. ”

"ನನ್ನ ಕಟ್ಟಾಣೆಯಿದೆ ಹೇಳಲೇ ಬೇಕೆಂದು. ಯಾರ ಆಣೆಯನ್ನು ಅನುಸರಿಸುವೆ? ಈಗ ನೀನು ಯಾರ ಕೈಯಲ್ಲಿ ಇರುವೆ ಎಂಬುದನ್ನು ನೆನೆ ಹುಂ, ಹೇಳಿ ಬಿಡಯ್ಯ ಮೂರ್ತಿ."

"ಹೇಳಲೋ, ಬೇಡವೋ? ಇತ್ತದರಿ, ಅತ್ತ ಪುಲಿ. ಏನು ಮಾಡಲಿ ದೇವಿಯವರೇ?"

ಮೂರ್ತಿಯ ದೈನ್ಯದ ನಟನೆ ದೇವಿಯನ್ನು ಪೂರ್ತಿಯಾಗಿ ಬಲೆಗೆ ಸಿಕ್ಕಿಸಿತು. ಆಕೆ ಮೈಮರೆತು ಆತನ ಮಾತಿನ ಹರಿಯಲ್ಲಿ ಮುಳುಗತೊಡಗಿದಳು. ಆತನಿಗೆ ಬಿನ್ನವಿಸಿದಳು:

"ಹೇಳಯ್ಯ, ಹೇಳಿ ಬಿಡು ಬೇಗ; ನಾನೆಲ್ಲ ನೋಡಿಕೊಳ್ಳುವೆ ಆ ಮೇಲೆ ಬಂದುದನ್ನು."

"ಸರಿ ಹಾಗಾದರೆ; ನಿಮ್ಮ ಧೈರ್ಯದ ಮೇಲೆ ಹೇಳುವೆ"

"ಹೂಂ, ಹೇಳು, ಹೇಳು."

"ಇಂದು ರಾಜೇಶ್ವರರಿಗೆ ರಾಜೇಶ್ವರಿಯ ಅಂದರೆ ಪಿರಿಯರಸಿಯವರ ಅಂದರೆ ದೇವಿಯವರ ಅಂದರೆ ತಮ್ಮಗಳ ಮಂದಿರಕ್ಕೆ ಬರಲು ಆಗುವುದಿಲ್ಲವಂತೆ."

"ಏನು, ಅವರು ಇಲ್ಲಿಗೆ ಬರಲಾರರಂತೇ? ಇಂದು ಅವರ ದರ್ಶನವಿಲ್ಲವೇ? ನನಗೆ?"

"ಇದೆ, ಇದೆ."

"ಯಾವಾಗ?"

"ಬಹಳ ಹೊತ್ತಿಗೆ."

"ಎಷ್ಟು ಗಂಟೆಗೆ?"

"ಎಷ್ಟು ಗಂಟೆಗೊ? ಅದು ನಮ್ಮ ಮನಃಸ್ಥಿತಿಯನ್ನು ಅವಲಂಬಿಸಿದೆ. ತಾವು ಅವರನ್ನು ಧ್ಯಾನಿಸಿ ಧ್ಯಾನಿಸಿ ದಣಿದು ನಿದ್ದೆಹೋಗಿ ಕನಸನ್ನು ಕಂಡರೆ, ಆಗ ಆ ಕನಸಿನಲ್ಲಿ."

"ಎಲಾ ಚಾಂಡಾಲ! ಮತ್ತೆ ನಿನ್ನ ಚೇಷ್ಟೆಯನ್ನು ಆರಂಭಿಸಿದೆಯಾ?"

“ಹಾಗೆ ತಿಳಿದರೆ ಮಾತನಾಡುವುದೇ ಬೇಡ. ನಾನಾಗಿ ಹೇಳಿದೇನೆ?”

“ಇಂದು ಅವರು ಇಲ್ಲಿಗೆ ಬರದಿರಲು ಕಾರಣವೇನು ?”

“ಅದು ಬಹಳ ಗೋಪ್ಯವಾಗಿದೆ.”

“ಅಭಯಮಸ್ತು. ನಿರ್ಭಯವಾಗಿ ಹೇಳಿಬಿಡಪ್ಪ, ಮೂರ್ತಿ !”

“ಇದೀಗ ಈಕಡೆ ನಾನು ಬರುತ್ತಿರುವಾಗ ರಾಜೇಶ್ವರರು ಮಲಯವತಿಯ ಮಂದಿರದದೆಡೆಗೆ ಹೋಗುತ್ತಿರುವುದನ್ನು ಕಂಡೆ.”

“ಏನು, ಮಲಯವತಿಯ ಅಂತಃಪುರಕ್ಕೆ ? ನನ್ನ ಹೆಸರು ಕೂಡ ಆಗದವಳ ಮನೆಗೆ !”

“ಯಾವುದೋ ಘನವಾದ ಮಂತ್ರಾಲೋಚನೆಯಂತೆ. ಅವರನ್ನು ಬೀಳ್ಕೊಟ್ಟು ಮರಳಿಬಂದ ಮಂತ್ರಿವರರು ಉಸುರಿದರು.”

“ಇಂತಹ ತಂತ್ರವೆಲ್ಲ ನನಗೆ ತಿಳಿಯುವುದು. ಆದರೆ ಇನ್ನೇನು ಮಾಡಲಿ ಮೂರ್ತಿ ?”

“ಏನನ್ನು ಮಾಡುವುದು ಬೇಡ. ಊಟಮಾಡಿ ಸುಮ್ಮನೆ ಮಲಗಿಕೊಳ್ಳಿ.”

“ಹಾಗಲ್ಲವಯ್ಯ ಮೂರ್ತಿ. ನನ್ನ ಹೊಟ್ಟೆಯೊಳಗಿನ ಕಸಿವಿಸಿಯನ್ನು ನೀನೇನು ಬಲ್ಲೆಯೋ ? ನನ್ನ ಒಳಗಿನ ದುಃಖವನ್ನು ಯಾರಮುಂದೆ ಹೇಳಿಕೊಳ್ಳಲಿ ?”

“ಏಕೆ, ನನ್ನಮುಂದೆ ? ಏನಾದರೂ ಅಭ್ಯಂತರವಿದೆಯೆ ?”

“ಏನೂ ಇಲ್ಲ; ಆದರೆ— ; ಸರಿ. ಮೂರ್ತಿ, ಇಂದು ನೀನೇ ನನಗೆ ನರ್ಮಸಚಿವನಲ್ಲದೆ ಧರ್ಮಸಚಿವನೂ ಆಗು. ನಿನ್ನ ಮುಂದೆ ಎಲ್ಲವನ್ನೂ ಹೇಳಿಬಿಡುವೆ. ಇದೀಗ ಒಲುಮೆಯ ಅವುತಣದಲ್ಲಿ ಅಗ್ರತಾಂಬುಲವನ್ನು ಪಡೆದ ದೀಪಾವಳಿಯ ಹಬ್ಬ ಆರಂಭವಾಗಿದೆ. ಇಂದು ಭೋಗಿ; ನಾಳೆ ನರಕ ಚತುರ್ದಶಿ. ನನ್ನ ಪ್ರಾಣೇಶ್ವರನು ಸ್ವಯಂವರದಲ್ಲಿ ನನ್ನನ್ನು ವರಿಸಿದಂದಿನಿಂದ —ಅಲ್ಲ, ಸ್ವಯಂವರದಲ್ಲಿ ನಾನು ಇವರನ್ನು ವರಿಸಿದಂದಿನಿಂದ — ಇವರು ಪ್ರತಿವರ್ಷವೂ ಈ ಹಬ್ಬವನ್ನು ನನ್ನ ಮಂದಿರದಲ್ಲಿ ಇದ್ದುಕೊಂಡು ಬಹು ಉಲ್ಲಾಸದಿಂದ ಕಳೆವರು. ಇದಕ್ಕೆ ಒಂದು ಸಲವೂ ಭಂಗ ಬಂದುದಿಲ್ಲ.

ಪತಿದೇವರ ಆರಾಧನೆಯಲ್ಲಿ ನಿತ್ಯ ನಿರತಳಾದ ನನಗೆ ಅನ್ಯಭಾವನೆ ಎಂಬುದು ಇಲ್ಲ. ಹೀಗಿರಲು ಇಂದು ಇವರಿಗೆ ಅದೆಂತಹ ವಿಸ್ಮೃತಿಯೋ? ಅಜ್ಞಾತವಾಗಿ ನನ್ನಿಂದ ಏನಾದರೂ ಅಪರಾಧ ಘಟಿಸಿದೆಯೋ? ಇಲ್ಲವೇ ಇದು ಯಾವೊಂದು ಪೂರ್ವಕೃತ ಪಾಪಕರ್ಮದ ಫಲವೋ? ಮೂರ್ತಿ, ಇದಕ್ಕೆ ಏನು ಮಾಡಲಿ ಹೇಳಯ್ಯ.''

''ಛೀ, ಛೀ,! ಹಾಗೆ ಸರ್ವಥಾ ಚಿಂತಿಸಬೇಡ, ರಾಜ್ಞೀ. ಪುಣ್ಯಶ್ಲೋಕರಾದ ಪತಿವ್ರತೆಯರ ಪಂಕ್ತಿಯಲ್ಲಿ ಸೇರಲರ್ಹಳು ನೀನು. ಸುವಿಖ್ಯಾತ ವಿದ್ಯಾಧರ ವಂಶದ ಶಿಲಾಹಾರ ಅರಸು ಮನೆತನದಲ್ಲಿ ಜನಿಸಿ, ಚಂದ್ರಲೇಖೆ ಎಂಬ ಸುರಮ್ಯನಾಮಧೇಯವನ್ನು ಧರಿಸಿ ಚಂದ್ರಸಮನಾದ ಪ್ರಕಾಶರೇಖೆಯಿಂದ ಅದರ ಕಾಂತಿಯನ್ನು ಉಜ್ವಲಿಸಿದವಳು ನೀನು. ಈ ಕಲಿಯುಗದಲ್ಲಿ ಪೂರ್ವಯುಗದ ಸ್ವಯಂವರದ ಸಂಪ್ರದಾಯವನ್ನು ಪುನರುಜ್ಜೀವನಗೊಳಿಸಿ, ಕಲಿಯುಗ ಧರ್ಮರಾಜನೆನಿಸಿದ ವಿಕ್ರಮಾಂಕಚಕ್ರವರ್ತಿಯನ್ನು ಏಕನಿಷ್ಠೆಯಿಂದ ವರಿಸಿದವಳು ನೀನು. ಇಂತು ವರಿಸಿ, ಕಲ್ಯಾಣವನ್ನು ನೆರವೇರಿಸಿ, ಈ ಕಲ್ಯಾಣ ನಗರಿಗೆ ಬಂದು ಸಕಲರ ಕಲ್ಯಾಣವನ್ನು ಸಂವರ್ಧಿಸಿದವಳು ನೀನು. ದೇವೀ, ನಿನ್ನಲ್ಲಿ ಕುಂದುಂಟೆ?

''ಇದೀಗ ನಿನಗೆ ಒದಗಿದ ಈ ಕಷ್ಟದಲ್ಲಿ ಏನು ಮಾಡಬೇಕು ಎಂಬುದನ್ನು ಕ್ಷಣಕಾಲ ಆಲೋಚಿಸಿ ಹೇಳುವೆ. ಜನ್ಮದಾರಭ್ಯ ನೈಷ್ಠಿಕ ಬ್ರಹ್ಮಚಾರಿಯಾಗಿದ್ದ ನನಗೆ ಜಿತೇಂದ್ರಿಯತ್ವದ ಮೂಲಕ ಹಲವು ಸಿದ್ಧಿಗಳು ಹಸ್ತಗತವಾಗಿವೆ. ಅವುಗಳ ಬಲದಿಂದ ಪ್ರಸ್ತುತ ಸಂದರ್ಭದಲ್ಲಿ ಯಾವಗ್ರಹವು ವಕ್ರವಾಗಿದೆ ಎಂಬುದನ್ನು ಪರೀಕ್ಷಿಸುವೆ. ನನ್ನ ದೇಹ ಬರಿಯ ಒಂದೂವರೆ ಮೊಳ ಉದ್ದವೂ, ಅದರ ಗಾತ್ರ ದೊಡ್ಡ ಹೀರೇಕಾಯಿಯಷ್ಟು ಅಗಲವೂ, ನನ್ನ ಮುಖ ಇಲಿಯ ಕಿವಿ, ಬೆಕ್ಕಿನ ಕಣ್ಣು, ನಾಯಿಯ ಮೂಗು, ಮೊಲದ ಬಾಯಿಯನ್ನು ಅಂಟಿಸಿದ ಕೆಂಪು ಕುಂಬಳಕಾಯಿಯಂತೆ ತೋರುತ್ತಿದ್ದರೂ, ನಾನೊಬ್ಬ ನಂಬತಕ್ಕ ಜೀವಿ ಎಂದು ನೀವು ನನ್ನಲ್ಲಿ ವಿಶ್ವಾಸ ಇರಿಸಿರುವಿರಿ. ಅರಮನೆಯಲ್ಲಿ ಎಲ್ಲಿ ಬೇಕಾದಲ್ಲಿ ಯಾವ ಹೊತ್ತಿನಲ್ಲಿಯೂ ಸಂಚರಿಸಲು ನನಗೆ ಮುಕ್ತದ್ವಾರವಿದೆ. ನನ್ನ ತೊಟ್ಟಿ ಹೆಸರು ಭೃಗು ಎಂದು ಇದ್ದರೂ ಬಟು, ವಾಮನಮೂರ್ತಿ ಎಂದು ಸಂಬೋಧಿಸುತ್ತ ನನಗೆ ರಾಜಭವನದ

ನರ್ಮಸಚಿವನೆಂಬ ಪದವಿಯನ್ನು ದಯಪಾಲಿಸಿರುವಿರಿ. ಆದುದರಿಂದ ಸಾಮ್ರಾಜ್ಞೀ, ನಾನು ಉಸುರುವ ಉಕ್ತಿಯಲ್ಲಿ ಆಸ್ಥೆ ಇದೆಯಷ್ಟೆ ?"

"ಹೇಳಯ್ಯ ಮೂರ್ತಿ, ಹೇಳು."

ಮೂರ್ತಿ ಕಣ್ಣುಗಳನ್ನು ಮುಚ್ಚಿಕೊಂಡು ನಿಶ್ಚಲನಾಗಿ ನಿಂತನು. ಕೆಲ ನಿಮಿಷ ಧ್ಯಾನಸ್ಥನಾದಂತೆ ನಟಿಸಿ, ಬಳಿಕ ಕೈಬೆರಳುಗಳನ್ನು ಮಡಚುತ್ತ ಸೆಟಿಸುತ್ತ ಏನೇನೋ ಲೆಕ್ಕ ಹಾಕತೊಡಗಿದನು. ಸ್ವಲ್ಪ ಹೊತ್ತಾಗಲು ಕೈಗೆ ಕೈ ತಟ್ಟಿ ಚಪ್ಪಾಳೆ ಹೊಡೆದು, ಮೇಲಕ್ಕೆ ನೆಗೆದು ಎರಡು ಹೆಜ್ಜೆ ಮುಂದಕ್ಕೆ ಬಂದು ನಿಂತುಕೊಂಡನು. ಅಪೂರ್ವವಾದ ಭವಿಷ್ಯವನ್ನು ನುಡಿವ ಮಹಾ ಜ್ಞಾನಿಯ ಠೀವಿಯಿಂದ ಉಪನ್ಯಾಸವನ್ನು ಆರಂಭಿಸಿದನು :

"ಸಂಗಾತ್ ಸಂಜಾಯತೇ ಕಾಮಃ ಕಾಮಾತ್ ಕ್ರೋಧೋಽಭಿಜಾಯತೇ ।
ಕ್ರೋಧಾದ್ ಭವತಿ ಸಂಮೋಹಃ ಸಂಮೋಹಾತ್ ಸ್ಮೃತಿವಿಭ್ರಮಃ ॥"

"ಪ್ರಣಯದ ಗತಿ ಸದಾ ವಕ್ರವಾದುದು. ಪ್ರಣಯ ಬಾಧೆಯಿಂದ ಮಾನವನು ವಿಕಾರವಶನಾಗುವನು. ವಿಕಾರವಶತೆಯಿಂದ ಪ್ರಮಾದಗಳು ಸಂಭವಿಸುವುವು."

"ದೇವಿ, ನಿನ್ನಂತಹ ಪ್ರೌಢೆ ಇಷ್ಟು ದೂರ ಚಾಪಲ್ಯಕ್ಕೆ ಹೋಗಬಾರದಾಗಿದ್ದಿತು. ಅದು ಹೇಗೆ ಎಂಬುದನ್ನು ತಿಳಿದು ನೋಡು. ಮೊದಲನೆಯದಾಗಿ; ಆ ಬಡ ನಾಗಿಣಿ ರಾಗಿಣಿಯರು ನಿನಗೆ ಏನು ಮಾಡಿದರು, ಪಾಪ! ಸುಮ್ಮಸುಮ್ಮನೆ ಅವರನ್ನು ಹಿಂಸೆಪಡಿಸಿದೆ."

"ಆ ಗಯ್ಯಾಳಿಯರು ನಾನು ಕೇಳಿದ ಪ್ರಶ್ನೆಗೆ ಸರಿಯಾಗಿ ಉತ್ತರ ಕೊಡಬಾರದೇಕೆ ?"

"ಇದು ಅವರ ತಪ್ಪೇ, ದೇವಿ ? ಸ್ವಲ್ಪ ವಿಚಾರಿಸು. ಬಣ್ಣಬಣ್ಣದ. ಮುದ್ದಿನ ಅರಗಿಳಿಗಳು ಬೇಕೆಂದು, ಇನ್ನೂ ಮರಿಯಾಗಿದ್ದಾಗ ಅಡವಿಯಿಂದ ಅವುಗಳನ್ನು ತರಿಸಿ, ನಿನ್ನ ಮಂದಿರದಲ್ಲಿ ಪ್ರೀತಿಯಿಂದ ಸಾಕಿ ಸಲಹಿದೆ. ನಾನಾ ವಿದ್ಯೆಗಳನ್ನು ಅಭ್ಯಾಸಮಾಡಿಸಲು ಪ್ರಯತ್ನಿಸಿದೆ. ಅವು ಒಂದೊಂದು ಮಾತನಾಡಲು, ಸ್ವಲ್ಪ ರಾಗಮಾಡಲು, ತಾಳಹಾಕಲು, ಕುಣಿಯಲು ಕಲಿತುಕೊಂಡುವು. ಯಾವಾಗಲೂ ಕಣ್ಣಮುಂದೆ ಇರುವಂತೆ ನಿನ್ನ ಅಂತಸ್ತಿನ

ಮುಂದುಗಡೆ ಸುಂದರವಾದ ಸುವರ್ಣ ಪಂಜರಗಳಲ್ಲಿ ಅವುಗಳನ್ನು ತೂಕ ಹಾಕಿದೆ. ನಿತ್ಯ ಸಾಯಂಕಾಲ ನೃತ್ಯಾಚಾರ್ಯರು ನಿನ್ನ ಮಂದಿರಕ್ಕೆ ಬಂದು ಗೀತ ನೃತ್ಯಗಳ ಪಾಠವನ್ನು ನಡೆಸುವರು. ಆದರೆ ಇಂದು ಅವರಿಗೆ ವಿಶ್ರಾಂತಿ. ಇದ್ದಕ್ಕಿದ್ದ ಹಾಗೆ ಮನಸ್ಸಿನಲ್ಲಿ ಏನೇನನ್ನೋ ಎಣಿಸಿಕೊಂಡು ನೀನು ಅವುಗಳ ಹತ್ತಿರ ಹೋಗಿ ಪ್ರಶ್ನೆ ಕೇಳಿದೆ. ಇದು ಅವುಗಳಿಗೆ ಪರಿಚಿತವಲ್ಲದುದರಿಂದ ಅವು ದಿಗಿಲುಗೊಂಡು ಸರಿಯಾದ ಉತ್ತರ ಹೇಳಲಿಲ್ಲ. ಪಶುಜಾತಿ; ಅವುಗಳಿಗೇನು ತಿಳಿಯಬೇಕು. ನಿನ್ನ ರಾಜೇಶ್ವರರು ಯಾವಾಗ ಬರುವರು ಎಂಬುದು? ಅದಕ್ಕಾಗಿ ನೀನು ರೇಗಿದೆ; ಅವುಗಳಿಗೆ ಕ್ರೂರಶಿಕ್ಷೆಯನ್ನೂ ವಿಧಿಸಿದೆ!

"ಎರಡನೆಯದಾಗಿ; ಸ್ವವಿಷಯ. ಆದರೂ ಸಂಕೋಚವಿಲ್ಲದೆ ಹೇಳುವೆನು. ಇದು ಮೊದಲಿನದಕ್ಕಿಂತಲೂ ಸೂಕ್ಷ್ಮವೂ ಘೋರವೂ ಆದುದು. ಬ್ರಹ್ಮದ್ರೋಹ ಬಹು ಘಾತಕ. ಬ್ರಹ್ಮಸಂಭೂತನಾದ ನನ್ನನ್ನು ಅಕಾರಣವಾಗಿ ಎಲುವು ಮುರಿಯುವಂತೆ ಥಳಿಸಿದೆ. ಅಯ್ಯಯ್ಯೋ! ನನ್ನ ಮೈಯೆಲ್ಲ ನೋಯುತ್ತಲಿದೆ. 'ಅತ್ಯುತ್ಕಟೈಃ ಪಾಪಪುಣ್ಯೈಃ ಇಹೈವ ಫಲಮಶ್ನುತೆ!' ಅತಿಯಾದ ಪಾಪವನ್ನಾಗಲಿ, ಪುಣ್ಯವನ್ನಾಗಲಿ ಮಾಡುವವನು ಅದರ ಫಲವನ್ನು ತ್ವರಿತದಲ್ಲಿ ಇಲ್ಲಿಯೇ ಅನುಭವಿಸುವನು. ಆದುದರಿಂದ ನಿನ್ನೀ ಅತಿಶಯವಾದ ಅಚಾತುರ್ಯದ ತತ್ವಗಳ ಪರಿಣಾಮವನ್ನು ಇದೀಗ ನೀನು ಅನುಭವಿಸುತ್ತಲಿರುವೆ!"

"ಮೂರ್ತೀ, ಇದಕ್ಕೆ ವಿಮೋಚನೆ ಎಂಬುದು ಇಲ್ಲವೇ?"

"ಇರದೇ ಏನು? 'ವಚನಾತ್ ಪ್ರವೃತ್ತಿಃ, ವಚನಾತ್ ನಿವೃತ್ತಿಃ', ನಿನ್ನೀ ಅಪರಾಧಗಳಿಗಾಗಿ ಪಶ್ಚಾತ್ತಾಪಪಟ್ಟು ನೋಯಿಸಿದವರ ನೋವನ್ನು ಆರಿಸಿ ಸಂತೋಷಗೊಳಿಸು."

"ಮೂರ್ತೀ, ಹಾಗೆ ಮಾಡುವೆನಪ್ಪಾ. ಇಕೋ, ನಾಗಿಣಿ ರಾಗಿಣಿಯರ ಶಿಕ್ಷೆಯನ್ನು ತೊಡೆದುಹಾಕಿದ್ದೇನೆ. ಅವರು ಎಂದಿನಂತೆ ನನ್ನ ಅಂತಃಪುರದ ಸಮ್ಮುಖದಲ್ಲಿ ಸುಖವಾಗಿ ಇರಲಿ. ಇನ್ನು,

ಕರ್ಮಲೋಕದಿ ಬಂದು ವಿಕ್ರಮ ಮೆರೆಸಿದ
ಪೆರ್ಮೆಯ ವಾಮನಮೂರ್ತಿ!

ಧರ್ಮಬಂಧುವೆ, ಎನ್ನ ಧರ್ಮವ ಮನ್ನಿಸು ;
ನರ್ಮಮಂತ್ರಿಯೆ, ನಿನಗೆ ಶರಣು.

ವಾಮನಮೂರ್ತಿಗಳು ನನ್ನ ಸರ್ವಾಪರಾಧವನ್ನು ಕ್ಷಮಿಸಬೇಕು. ನನ್ನ ಅಂತಃಪುರದಲ್ಲಿಯೂ ಅವರಿಗೆ ಸದಾ ಸರ್ವದಾ ಸ್ವೈರ ಸಂಚಾರವಿರಲಿ. ಈ ದೀಪಾವಳಿಯ ಹಬ್ಬ ಮುಗಿವವರೆಗೂ ಅವರು ನನ್ನ ಮಾನ್ಯ ಅತಿಥಿಗಳಾಗಿ ಉಳಿದುಕೊಂಡು ಅಗ್ರಮರ್ಯಾದೆಗಳನ್ನು ಪಡೆಯಲಿ. ಇದಲ್ಲದೆ ಈ ಹಬ್ಬದ ನಿಮಿತ್ತ ಅವರಿಗೆ ದಕ್ಷಿಣೆ ದಾನಗಳು ಎಂದಿಗಿಂತ ಇಮ್ಮಡಿಯಷ್ಟು ಸಲ್ಲುವುವು. ಈಗಲಾದರೂ ಪ್ರಾಯಶ್ಚಿತ್ತವು ಪೂರ್ಣವಾಯಿತೆ? ಸರಿ, ಮುಂದೇನು?''

''ಇನ್ನು ಎಲ್ಲವು ಸರಿಹೋಗುವುದು''

''ಅಂದರೆ? ನಾಥರು ಇಂದು ಇಲ್ಲಿಗೆ ಬರುವರೇ?''

''ಬರುವರು; ಇನ್ನು ಸ್ವಲ್ಪ ಹೊತ್ತಿನಲ್ಲಿಯೇ ಬಂದು ಬಿಡ ವರು.''

''ನಿಜವಾಗಿಯೇ ಮೂರ್ತಿ? ಮಲಯವತಿಯ ಮಂದಿರಕ್ಕೆ ಹೋದರು ಎಂದು ಇದೀಗ ಹೇಳಲಿಲ್ಲವೆ ನೀನು?''

''ಇರು, ಇರು'' ಎಂದು ನುಡಿದು ಮೂರ್ತಿ ಮತ್ತೆ ಕೈಬೆರಳಲ್ಲಿ ಏನೇನನ್ನೋ ಗುಣಿಸಿದನು. ಬಳಿಕ ರಾಜ್ಞಿಯನ್ನು ಸಂಬೋಧಿಸಿದನು: ''ದೇವೀ, ಮನುಷ್ಯರು ಮಾಡುವ ಪುಣ್ಯಾಪಾಪಗಳೇ ಅವರ ವಿಷಯದಲ್ಲಿ ಅನ್ಯರ ಮನೋಭಾವಗಳನ್ನು ಮಾರ್ಪಡಿಸಿ ಅವರಿಂದ ಅನುಕೂಲ ಪ್ರತಿಕೂಲ ವರ್ತನೆಯನ್ನು ಒದಗಿಸಲು ಸಹಾಯವಾಗುವುವು. ರಾಜ್ಞಿ, ಈ ಮೊದಲಿನ ನಿನ್ನ ಅಕೃತ್ಯದ ಮೂಲಕ ನಿನ್ನ ಬಗೆಗೆ ರಾಜೇಶ್ವರರ ಮನಸ್ಸಿನಲ್ಲಿ ವಿಕಲ್ಪ ಉಂಟಾಗಿ ನಿನ್ನ ಮನೆಗೆ ಬರಲೆಂದು ಹೊರಟ ಅವರು ಮಲಯವತಿಯ ಮಂದಿರದತ್ತ ಹೊರಳಿದರು. ಆದರೆ ಆ ಇದೀಗಿನ ನಿನ್ನೀ ಸಾಧುವಾದ ಆಚರಣೆಯಿಂದ ಅವರ ಮನೋವೃತ್ತಿಯಲ್ಲಿ ಮತ್ತೊಂದು ಪರಿವರ್ತನೆ ಸಂಭವಿಸಿ, ಅವರು ರಾಜ್ಞಿ ಮಲಯವತಿಯ ಮಂದಿರಕ್ಕೆ ಹೋಗದೆ ರಾಜಕುಮಾರಿ ಮಲಯವತಿಯ ಮಂದಿರಕ್ಕೆ ಹೋಗಿರುವರು. ಅವರು ಅಲ್ಲಿಯೇ ಇರುವರು.''

''ಏನು ಮುದ್ದುಮಗು ಮೈಲಳೆಯ ಮಂದಿರದಲ್ಲಿ! ಈ ಹೊತ್ತಿಗೆ?''

''ಆಹುದು ಅಲ್ಲಿಯೇ. ಏನೋ ಒಂದು ರಾಜಕೀಯವನ್ನು ಕುರಿತು ಅವಸರದ ಆಪ್ತಾಲೋಚನೆಯಂತೆ.''

"ರಾಜಕೀಯದ ಆಪ್ತಾಲೋಚನೆ ಮೈಲಳಿಯ ಕೂಡ! ಇಷ್ಟು ಅವಸರದಿಂದ! ಇದೇನು ಸೋಜಿಗದ ಮಾತು?"

"ನೃಪನೀತಿರನೇಕ ರೂಪಾ; ರಾಜನೀತಿಯ ಆಟಗಳು ಹಲವು."

"ನಿನಗೆ ತಿಳಿಯದೆ?"

"ತಿಳಿಯದು. ನಮ್ಮವರೆಲ್ಲವು ಅಂತಃಸಾಮ್ರಾಜ್ಯ, ಬಹಿಸ್ಸಾಮ್ರಾಜ್ಯದ ವಿಷಯಗಳು ನಮಗೆ ಬಾಹಿರವಾದುವು."

"ಸಾಮ್ರಾಜ್ಯನೌಕೆ ಇದೀಗ ಕ್ಷುಬ್ಧವಾದ ಲಹರಿಯಲ್ಲಿ ಈಜುತ್ತಿದೆಯಂತೆ."

"ಇರಬಹುದು."

"ಮಹತ್ತರ ಘಟನೆಗಳು ಮುಂಪೋಡುತ್ತಿವೆಯಂತೆ."

"ಇರಬಹುದು."

"ಈ ರಾಜಕೀಯದಲ್ಲಿ ತೊಡಗಿದುದರಿಂದಲೆ ನಾಥರಿಗೆ ಇಷ್ಟು ತಡವಾಗಿದೆ, ಅಲ್ಲವೇ?."

"ಇರಬಹುದು."

"ಇನ್ನೂ ಎಷ್ಟು ಹೊತ್ತೋ ಬರುವುದಕ್ಕೆ."

"ಇಷ್ಟರಲ್ಲಿ ಬರಬಹುದು."

"ಇಕೊ! ಬಂದೇ ಬಿಟ್ಟೆನು, ಪ್ರಿಯೆ."

ಬಾಗಿಲ ದಿಕ್ಕಿನಿಂದ ಶಬ್ದಗಳು ಕೇಳಿಸಿದುವು. ವಿರಹಿಣಿ-ಮೂರ್ತಿಗಳು ಧ್ವನಿಯನ್ನು ಗುರುತಿಸಿ ಚಟ್ಟನೆ ಎದ್ದು ನಿಂತರು.

"ರಾಜೇಶ್ವರರೇ, ರಾಜೇಶ್ವರಿ ರಾಜಹಂಸಿಯಂತೆ ತಮ್ಮ ದರ್ಶನಕ್ಕಾಗಿ ಕೊರಗುತ್ತಿರುವರು. ತಾವು ಆಜ್ಞಾಪಿಸಿದ ನನ್ನ ಸಂಧಾನ ಕಾರ್ಯವು ನೆರವೇರಿದಂತಾಯಿತು. ಇಷ್ಟು ಹೊತ್ತಿನವರೆಗೆ ಅವರ ಮನವನ್ನು ಒಲಿಸಲು ಶ್ರಮಿಸಿ ಸುಣ್ಣವಾದೆನು. ಇನ್ನು ಮೇಲೆ ತಮ್ಮ ಬಣ್ಣ ಬೆಳಗಲಿ. ಅಪ್ಪಣೆ ಕೊಡಿ; ಹೊರಡುವೆ."

"ಓಹೋ! ನರ್ಮಮಂತ್ರಿ ವಾಮನಮೂರ್ತಿಗಳು, ಇನ್ನೂ ಇಲ್ಲಿಯೆ ಇದ್ದೀರಾ? ಬನ್ನಿ, ಬನ್ನಿ." ವಿಕ್ರಮಾದಿತ್ಯನು ಮೂರ್ತಿಯ ಕಡೆಗೆ ನೋಡುತ್ತ ಮುಗುಳು ನಗೆಯಿಂದ ನುಡಿದನು.

ಮೂರ್ತಿ ಹೊರಟು ಹೋದನು.

ಆ ಏಕಾಂತ ಮಂದಿರದಲ್ಲಿ ಪ್ರಸನ್ನರಮಣೀಯ ಪ್ರಕಾಶವೊಂದು ಸೂಸತೊಡಗಿತು. ಮಂದಹಾಸವನ್ನು ಬೀರುತ್ತ ರಾಜೇಶ್ವರನು ತನ್ನ ಅರ್ಧಾಂಗಲಕ್ಷ್ಮಿಯನ್ನು ಆಲಿಸಿದನು. ದೇದೀಪ್ಯಮಾನ ದೀಪ್ತಿಯೊಂದು ಆತನ ಮನೋಹರ ಮುಖಮುದ್ರೆಯಲ್ಲಿ ಮೊಳಗುತಲಿತ್ತು. ಅದನ್ನು ಎವೆ ಯಿಕ್ಕದ ಕಣ್ಗಳಿಂದ ನೋಡುತ್ತ ನೋಡುತ್ತ ಚಂದ್ರಲೇಖೆ ಮೈಮರೆತಳು. ಸ್ವಪ್ನ ಸಮನಾದ ಉದಾತ್ತ ಭಾವಲಹರಿಯೊಂದು ಆಕೆಯನ್ನು ತೇಲಿಸಿ ಕೊಂಡು ಎತ್ತಿ ತಂದು ವಲ್ಲಭನ ತೆಕ್ಕೆಯಲ್ಲಿ ಇರಿಸಿತು.

---

## ಕಿರಣ ಐದು

# ರಾಜನಂದಿನಿ

"ಮಾಲೆ, ದೀಪಾವಳಿಯ ಕತೆಯನ್ನು ಕೇಳಿರುವೆ, ಅಲ್ಲವೇ. ?"

"ಹುಂ; ಕೇಳಿರುವೆ, ಅಪ್ಪ."

ದೀಪಾವಳಿಯ ಮೊದಲು ದಿನವಾದ ನರಕ ಚತುರ್ದಶಿಯ ಮುಂಜಾವ ದಲ್ಲಿ ಮಂಗಲಾರತಿ, ಮಂಗಲ ಸ್ನಾನಾದಿಗಳನ್ನು ಮುಗಿಸಿಕೊಂಡು ರಾಜ ಕುಮಾರಿ ಮೈಲಳದೇವಿಯ ಮಂದಿರಕ್ಕೆ ಐತಂದಿದ್ದನು ವಿಕ್ರಮಾದಿತ್ಯ. ಆತನ ಬರವನ್ನು ಕಂಡ ಮಲಯವತಿ ಮುಂದೆ ಬಂದು ಭಕ್ತಿಪುರಸ್ಸರವಾಗಿ ಆತನನ್ನು ಒಳಗೆ ತನ್ನ ಕಲಾಮಂದಿರದಲ್ಲಿ ಕರೆದುಕೊಂಡು ಹೋದಳು. ಮಂದಿರದಲ್ಲಿಯ ಚೆಂದದ ಸುಖಾಸನದ ಮೇಲೆ ಪಿತಾ-ಪುತ್ರಿ ಸಂತೋಷವಾಗಿ ಕುಳಿತುಕೊಂಡರು. ತಂದೆ ಪ್ರಸನ್ನ ಅಂತಃಕರಣದಿಂದ ಸಂಭಾಷಣೆಯನ್ನು ಪ್ರಾರಂಭಿಸಿದನು.

ತಂದೆ ಹರೆಯನ್ನು ಮೀರಿದವನು ಎಂದು ತೋರುತ್ತಿದ್ದರೂ ಆತನ ವಯಸ್ಸು ಇಂತಿಷ್ಟು ಎಂದು ನಿರ್ಧರಿಸಿ ಹೇಳುವುದು ಹಗುರಾಗಿರಲಿಲ್ಲ. ಸುಮಾರು ಅರುವತ್ತರ ಆಚೆ-ಈಚೆ ಎಂದು ಬಲ್ಲವರು ಯಾರಾದರೂ ಹೇಳಿದರೆ ನಂಬುವಂತೆ ಇರಲಿಲ್ಲ. ಏಕೆಂದರೆ ಆ ದೇಹಧಾಟಿ ಇಳಿತರದ ಶಿಥಿಲತೆಯಿಂದ

ಜೋತಂತಹದು ಆಗಿರದೆ, ನಾಲ್ವತ್ತು ವಯಸ್ಸಿನ ದೃಢಕಾಯನ ಪ್ರೌಢಿಮೆ ಯಿಂದ ಬಿಗುವುಗೊಂಡಿತ್ತು. ಆತನ ನಿಲುವು ಸುಮಾರು ಆರಡಿ ಇದ್ದು ಅಂಗಾಂಗಗಳು ಮಾಂಸ ಲತೆಯಿಂದ ಪುಷ್ಟವಾಗಿದ್ದುವು. ಮೈಬಣ್ಣವು ಚಿನ್ನವನ್ನು ಸರಿಗಟ್ಟುತ್ತಿದ್ದರೂ ಅದರ ಮೇಲೆ ಮಾಸಿದ ಪರಿಯೊಂದು ತೆಳುವಾಗಿ ಹರಡಿಕೊಂಡಿದ್ದಿತು ಎಂದು ಹೇಳಬೇಕಾದುದು. ಮುಖ ನಸು ಉದ್ದನೆಯ ದುಂಡುಪರಿಯದಾಗಿದ್ದು, ನಿಡಿದಾದ ಮೂಗೂ ಕೂರ್ನೋಟದ ಹರವಾದ ಹೊಳಪಿನ ಕಣ್ಣುಗಳು ಅದರ ಘನತೆಯನ್ನು ಹೆಚ್ಚಿಸುತಲಿದ್ದುವು. ಇವುಗಳಿಗೆ ನೆರವಾಗಿ ತುಂಬು ಮೀಸೆಯ ತುಟಿಗಳು ತಮ್ಮ ಬಿಲ್ಲಿನ ಬೀಗನ್ನು, ಹುಬ್ಬುಗಳು ತಮ್ಮ ಕೊಂಕಿನ ಅಳವನ್ನು, ಹಣೆ ತನ್ನ ವಿಸ್ತಾರದ ಔನ್ನತ್ಯ ವನ್ನು ಬೆಳಸಿಕೊಂಡು ಆ ಆನನದ ಐಸಿರಿಯನ್ನು ಪ್ರಸ್ತಾಪಿಸುತ್ತಿದ್ದುವು. ಆ ಮೊಗ-ಒಮ್ಮೆ ಕಂಡವನು ಅದನ್ನು ಎಂದೂ ಮರೆಯಲಾರನು. ಆ ಕಣ್ಣು ಗಳು-ಅವುಗಳ ಕಾರ್ಯಕ್ಷೇತ್ರದಲ್ಲಿ ಬಂದವನಿಗೆ ಅವುಗಳ ಅಂಕೆಯನ್ನು ಮೀರುವ ಧೈರ್ಯ ಆಗುತ್ತಿರಲಿಲ್ಲ. ಅನ್ಯಾದೃಶ ಪ್ರಭಾವಶಾಲಿಯಾದ ಆ ಆಕೃತಿಯಲ್ಲಿ ಲೋಕವನ್ನೇ ಜಯಿಸುವ ಲೋಕೋತ್ತರ ಶಕ್ತಿಯೊಂದು ಅಧಿಷ್ಠಿತವಾದಂತೆ ಭಾವನೆ ಆಗುತ್ತಿದ್ದಿತು.

ಆತನ ಉಡುಪು ಆಡಂಬರದ್ದು ಆಗಿರದಿದ್ದರೂ ಅಂದವಾಗಿದ್ದಿತು. ಹಣೆಯಲ್ಲಿ ಮಾಟವಾದ ಕಸ್ತೂರೀ ತಿಲಕ. ತಲೆಯನ್ನು ಮುಚ್ಚಿಕೊಂಡ ತುಂಬುಗೂದಲು ಸೂಡು ಓರಣದ ಕಟ್ಟಿನಲ್ಲಿ ನೇರವಾಗಿ ಹಿಂದಕ್ಕೆ ಇಳಿದು ಬೆನ್ನಮೇಲೆ ಸುಳಿದಾಡುತ್ತಿದ್ದಿತು. ಮಸ್ತಕದ ಮೇಲೆ ಚಿಕ್ಕ ಕಿರೀಟದಾಕಾರದ, ಭಾರವಲ್ಲದ, ರತ್ನಗಳ ಹೆಣಿಕೆಯಿಂದ ರಮ್ಯವಾದ, ಸ್ನಿಗ್ಧನೀಲ ಶಿರೋ ಭೂಷಣ, ಮೈಯಲ್ಲಿ ತೆಳ್ಳನೆಯ ತಿಳಿ ಅರಿಷಣ ಬಣ್ಣದ ರೇಶಿಮೆಯ ನಿಲುವಂಗಿ; ಕೆಳಗೆ ಕಿತ್ತಳೆಯಂಚಿನ ಅದೇ ಜಾತಿಯ ಬಿಳಿಯ ವೇಷ್ಟಿ. ಕೈಯಲ್ಲಿ ಭವ್ಯವಾದ ರಾಜದಂಡ.

ಮಲಯವತಿಯ ಪ್ರಾಯ ಇಪ್ಪತ್ತರ ಮೆಟ್ಟಲಿಗೆ ಬಂದಿರಬಹುದಾಗಿ ದ್ದರೂ ಆಕೆಯ ಮುಖ ಇನ್ನೂ ಬಾಲ್ಯದ ಮಧುರ ಮಾರ್ದವದಿಂದ ಮಿಲಿತ ವಾಗಿದ್ದಿತು. ಸಂಪಗೆಗಿಂತಲೂ ನಸುಗೆಂಪಿನ ಸಾರಂಗದ ಕಳೆಯನ್ನು ಮುಸ ಳಿಸುವಂತಹ ಸ್ಫುರತ್ ಮೈವೆಳಕು; ಆ ಬೆಳಕಿನಲ್ಲಿ ಪ್ರಭೆಯಿಂದ ಪ್ರಕಾಶಿಸು

ತಲಿರುವ, ಪ್ರಮಾಣವಿಟ್ಟು ಕಡ್ಡಿಯಿಂದ ಕೊರೆದು ಸೂಕ್ಷ್ಮವಾಗಿ, ನಯ ವಾಗಿ, ಉಜ್ಜ್ವಲವಾಗಿ ಕಂಡರಿಸಿದಂತೆ ಅಳವಟ್ಟಿರುವ ಮೋಹಕ ಅವಯವ ಗಳು, ಆ ಅವಯವಗಳಲ್ಲಿ ಪ್ರಧಾನಪಾತ್ರವನ್ನು ವಹಿಸಿರುವ ಅತಿಸರಲವಾದ ಮೂಗು, ನೀಳವಾದ ಕಣ್ಣುಗಳು, ತೆಳುವಾದ ತುಟಿ, ತುಂಬುಗಲ್ಲ, ಉಂಗುರು ಕೂದಲು; ಅವುಗಳಿಗೆ ಅನುರೂಪವಾಗಿ ಕಿವಿಯಲ್ಲಿಯೂ, ಕೊರಳಲ್ಲಿಯೂ, ಕೈಯಲ್ಲಿಯೂ, ಕಾಲಲ್ಲಿಯೂ ತೊಟ್ಟಿರುವ ಚಿನ್ನದ ರನ್ನದ ಮಿತವಾದ ಆಭರಣಗಳು. ಜರದ, ಕುಸುರಿನ ಹೂತಿರುಹಿದ, ಕೇಸರಿ ಬಣ್ಣದ ನವಿರಾದ ರೇಶಿಮೆ ಸೀರೆ, ತಿಳಿಹಸುರಿನ ಮೈಕುಪ್ಪಸ; ಇವೆಲ್ಲವು ಒಂದೊಂದಾಗಿಯೂ ಒಟ್ಟಾಗಿಯೂ ಅಲ್ಲಿ ಸೇರಿ, ಸೌಂದರ್ಯ ಸುಕುಮಾರತೆಯ ಸಾಮರಸ್ಯವೇ ವಿಗ್ರಹಗೊಂಡು ಚಲಿಸುತ್ತಿರುವಂತೆ ಭಾಸವಾಗುತ್ತಿದ್ದಿತು. ಬಾಹ್ಯರೂಪಿನ ಈ ದೀಪ್ತಿಗೆ ಪ್ರೇರಕ ಜ್ಯೋತಿಯಂತಿದ್ದ ಆಕೆಯ ಅಂತಃಪ್ರತಿಭೆ-ಆ ಪ್ರತಿಭೆಯ ನಿತ್ಯವಿಲಾಸಗಳಾದ ಬುದ್ಧಿವಂತಿಕೆ, ಕಲಾವಂತಿಕೆ, ಚತುರತೆ ಇವುಗಳು-ಪರಿಚಿತರನ್ನು ಇನ್ನೂ ಹೆಚ್ಚಾಗಿ ಹುಚ್ಚು ಹಿಡಿಸುತ್ತಿದ್ದುವು. ಇಂತಹ ಮಗ ಳಲ್ಲಿ ತಂದೆಯ ಮಮತೆ ಅಗಾಧವಾಗಿದ್ದಿತು. ಆಕೆಯ ಸಮಾಗಮದಲ್ಲಿ ಇರುವಾಗ ಆತನಲ್ಲಿಯ ಉತ್ತಮಾಂಶಗಳೆಲ್ಲವು ತೊರೆದು ಬಂದು ಆತನನ್ನು ಮೈಮರೆಯಿಸಿ ಬಿಡುತ್ತಿದ್ದುವು.

"ಮಗು. ಹಬ್ಬದ ಕತೆ ಎಷ್ಟು ರಮ್ಯವಾಗಿದೆ! ದೀಪಾವಳಿ ಎಂದರೆ ಬೆಳಕಿನ ಹಬ್ಬ. ಬಾಳಿನ ಬೆಳಕನ್ನು ಆವರಿಸ ಬಂದ ಅಂಧಕಾರವನ್ನು ಅಳಿಯಿಸಿ ಜೀವನದ ಪ್ರಭೆಯನ್ನು ಪ್ರಜ್ವಲಗೊಳಿಸುವುದರಿಂದ ಈ ಹಬ್ಬದ ಆಚರಣೆ ಸಫಲವಾಗುವುದು. ಜಯಶಾಲಿ ಜೀವನವು ಅಮರಜ್ಯೋತಿ ರೂಪ ವಾದುದು. ಅವರ ಬೆಳಕು ಅನೇಕರಿಗೆ ಒಳ್ಳೆಯ ಬದುಕಿನ ದಾರಿಯನ್ನು ತೋರಿಸುವುದು. ಇಂದು ಭಗವಾನ್ ಶ್ರೀಕೃಷ್ಣನು ಲೋಕಕಂಟಕನಾದ ನರಕಾಸುರನನ್ನು ಸಂಹರಿಸಿ ಆತನು ಬಂಧನದಲ್ಲಿ ಇರಿಸಿದ ಬಾಲೆಯರನ್ನು ಬಿಡುಗಡೆ ಮಾಡಿದನು."

"ಅಪ್ಪ, ಶ್ರೀಕೃಷ್ಣನ ಒಂದೊಂದು ಕೃತಿಯೂ ಅಮೋಘವಾದುದು! 'ಪರಿತ್ರಾಣಾಯ ಸಾಧೂನಾಂ ವಿನಾಶಾಯಚ ದುಷ್ಕೃತಾಂ' ಎಂದು ಆತನು

ಗೀತೆಯಲ್ಲಿ ಹೇಳಿಕೊಂಡಂತೆ ಎರಡು ವಿಧದಿಂದಲೂ ಅತ್ಯಂತ ಲೋಕ ಕಲ್ಯಾಣವನ್ನು ಸಾಧಿಸಿದ ಮಹಾನುಭಾವ ಆತ.''

''ಶ್ರೀ ಮಹಾವಿಷ್ಣುವಿನ ಅವತಾರ ಲೀಲೆಗಳ ರಹಸ್ಯವೇ ಇದು. ಆತನ ಇನ್ನೊಂದು ರೂಪವಾದ ವರಾಹ ಅವತಾರ ಕಥೆಯೂ ಹೀಗೆಯೇ ಅರ್ಥಪೂರ್ಣವಾಗಿದೆ. ಮುಳುಗಿದ ಮಹಿಯನ್ನು ಮೇಲಕ್ಕೆ ಎತ್ತಿ ಲೋಕೋದ್ಧಾರಕನೆಂಬ ತನ್ನ ಬಿರುದನ್ನು ಎತ್ತಿ ನಿಲ್ಲಿಸಿದ ಮಹಿಮೆ ಆತನದು. ಅರಸರು ವಿಷ್ಣುವಿನ ಅಂಗ ಎಂದು ನಮ್ಮವರ ನಂಬುಗೆ. ಈ ಮಾತಿಗೆ ಆಳವಾದ ಅಭಿಪ್ರಾಯವಿದೆ. ಲೋಕವನ್ನು ಮೇಲಕ್ಕೆ ಎತ್ತುವುದು, ಎಂದರೆ ಸರ್ವ ವಿಧದಿಂದ ಜನತೆಯ ಹಿತವನ್ನು ಸಾಧಿಸುವುದು ಅರಸುಗಳ ಮುಖ್ಯ ಕರ್ತವ್ಯವೆಂದು ಇದರಿಂದ ಸೂಚಿತವಾಗುತ್ತದೆ. ರಾಜಮುಕುಟ ಅಲಂಕಾರದ ವಸ್ತುವಲ್ಲ, ಅದೊಂದು ಭಾರ; ಪ್ರಜಾಹಿತವನ್ನು ನೆರವೇರಿಸಬೇಕೆಂದು ರಾಜನ ತಲೆಯ ಮೇಲೆ ಇರಿಸಿದ ಹೊಣೆ. ಇದನ್ನು ಅರಿಯದೆ ಅನೇಕ ಕುರಾಜರು ಆತ್ಮ ಪ್ರತಿಷ್ಠೆಗಾಗಿ ಸ್ವಾಧಿಕಾರವನ್ನು ದುರುಪಯೋಗಿಸಿ ತಮ್ಮನ್ನೂ ರಾಷ್ಟ್ರವನ್ನೂ ಅಧೋಗತಿಗೆ ನೂಕುವರು. ಆದಿಪೂರ್ವಜನಾದ ಸತ್ಯಾಶ್ರಯದೇವನಿಂದ ಸಂಸ್ಥಾಪಿತವಾದ ನಮ್ಮೀ ಚಾಲುಕ್ಯಕುಲದ ಅರಸರು ವಿಷ್ಣುವಿನ ಈ ಅವತಾರ ರಹಸ್ಯವನ್ನು ಅರಿತು, ಅದನ್ನೇ ಆದರ್ಶವಾಗಿ ಅನುಸರಿಸಲು, ಶ್ರೀ ವರಾಹವನ್ನು ತಮ್ಮ ಧ್ವಜಚಿಹ್ನೆಯಾಗಿ ಇಟ್ಟುಕೊಂಡಿರುವರು.''

''ಓಹೋ, ತಾತರೆ! ಹೀಗೆಯೆ? ಎಂತಹ ದೊಡ್ಡ ತತ್ತ್ವವನ್ನು ಎಷ್ಟು ಸುಲಭವಾಗಿ ಬಿಡಿಸಿ ಹೇಳಿದಿರಲ್ಲ! ನಮ್ಮೀ ವರಾಹಧ್ವಜದ ರಹಸ್ಯವು ಇದುವರೆಗೆ ನನಗೆ ಅಷ್ಟು ಚೆನ್ನಾಗಿ ಹೊಳೆದಿರಲಿಲ್ಲ. ಇದೀಗ ತಾವು ಮಾಡಿದ ವಿವರಣೆಯ ಬೆಳಕಿನಲ್ಲಿ ನಮ್ಮ ಪೂರ್ವಜರ ಅನೇಕ ಕೃತಿಗಳು ಎಷ್ಟು ಅರ್ಥಪೂರಿತವಾಗಿ ಪ್ರಕಾಶಿಸುತಲಿವೆ! ಅಲ್ಲಿ ನೋಡಿ, ಈ ಮೊದಲು ತಮಗೆ ತಿಳಿದಂತೆ, ನಾನು ಚಿತ್ತರಿಸುತಲಿರುವ ಚಾರಿತ್ರಕ ಚಿತ್ರಾವಳಿ ಇದಿರಿನಲ್ಲಿ ಕಾಣುತ್ತಿರುವುದು. ಆ ಮೊದಲಿನದು ದಿಗಂತ ಕೀರ್ತಿವೆತ್ತ ಶ್ರೀ ಪೃಥ್ವೀವಲ್ಲಭ ಪರಮೇಶ್ವರ ಪುಲಕೇಸಿ; ಎರಡನೆಯದು ಕಂಚಿಯಂ ಕೊಂಡ, ಆತನ ಮಗ ವಿಕ್ರಮಾದಿತ್ಯ; ಇತ್ತ ಈಚೆಗೆ ನಮ್ಮ ವಂಶದ ಪುನರುದ್ಧಾರಕ ತೈಲ ನರೇಂದ್ರ; ಇಲ್ಲಿ ತಾತರವರಾದ ಆಹವಮಲ್ಲರು; ಈ ಕೊನೆಯದು ತಮ್ಮ ಪಟ್ಟಬಂಧೋ

ತ್ಸವವನ್ನು ಕುರಿತುದು. ಇದೀಗಿನ ತಮ್ಮ ವಿವರಣೆಯಿಂದ ನನಗೊಂದು ಕಲ್ಪನೆ ಮೊಳೆತಿದೆ—ನಮ್ಮ ವರಾಹಧ್ವಜದ ಭವ್ಯವಾದ ಪಟವನ್ನು ಬರೆಯಬೇಕೆಂದು, ಅದರಲ್ಲಿ ತಾವು ಹೇಳಿದ ಅರ್ಥವನ್ನು ಸೂಚಿಸಬೇಕೆಂದು.''

''ವತ್ಸೆ, ವಿದ್ಯೆಯ ಜತೆಗೆ ನಿನ್ನಲ್ಲಿ ಬೆಳೆಯುತ್ತಿರುವ ಕಲಾವಂತಿಕೆ ನನ್ನ ಮನಸ್ಸನ್ನು ಅರಳಿಸುತ್ತಲಿವೆ. ನಿನ್ನನ್ನು ಕಂಡಾಗಲೆಲ್ಲ ಹಿಂದೆ ಕೆಲಕಾಲ ನನ್ನ ಜೀವನದಲ್ಲಿ ಅನುಭವಿಸಿ ಮಾಯವಾದ ಎರಡು ಮಧುರ ಸ್ವಪ್ನಗಳು ನನ್ನ ಕಣ್ಣಮುಂದೆ ಮತ್ತೆ ಸುಳಿದು ಬಂದು ನನ್ನ ಬಗೆಯನ್ನು ಸವಿಯಾಗಿಸುವುವು. ಮಾಲೆ, ನಿನ್ನಲ್ಲಿ ನಿನ್ನನ್ನು ಹೆತ್ತವಳ ಆ ರೂಪಸಂಪತ್ತಿ ಮತ್ತು ಹೃದಯದ ವಿಸ್ತಾರ ಇವೆರಡೂ ಇಳಿದು ನಿಂತಿವೆ. ನನ್ನನ್ನು ಹೆತ್ತ ಆ ಪೂತಾತ್ಮಳು ಗಂಗ ರಾಜ ವಂಶದವಳು. ಆಕೆಯ ಹೆಸರೇ ನಿನ್ನದು. ಆಕೆಯಂತೆ ಇನ್ನೊಬ್ಬಳೂ ನಿನ್ನ ಸೊಬಗನ್ನು ನೋಡಿ ನಲಿಯಲು ಹೆಚ್ಚು ದಿನ ಬಾಳಲಿಲ್ಲ. ಬೇಗ ಹೊರಟು ಹೋದಳು. ಮಗು, ಅವಳ ನೆನಪಿದೆಯೋ ನಿನಗೆ?"

''ಇದೇ ಅಪ್ಪ, ಸ್ವಲ್ಪ ಸ್ವಲ್ಪ. ನನ್ನ ಅಮ್ಮನ ಆ ಕೊರಲು ಎನಿತು ಇನಿದು! ಬೆಳಗಿನಲ್ಲಿ ಎದ್ದು ಆಕೆ ಹಾಡುತ್ತಿದ್ದ ಆ ಸಾವಿತ್ರಿಯ ಹಾಡಿನ ಸುಸ್ವರವು ಇನ್ನೂ ನನ್ನ ಕಿವಿಯಲ್ಲಿ ಅವಿತುಕೊಂಡಿದೆ. ಅದರ ಪದಗಳಾಗಲಿ ಅರ್ಥವಾಗಲಿ ನನಗೆ ಜ್ಞಾಪಕವಿಲ್ಲ; ಆದರೆ ಅದರ ಭಾವವು ಮಾತ್ರ ಹೇಗೋ ನನ್ನ ಹೃದಯದಲ್ಲಿ ತುಂಬಿಕೊಂಡಿದೆ.''

''ವತ್ಸೆ, ಅದು ಸ್ವರ್ಗೀಯ ಸಂಗೀತ. ಅದರ ಒಂದಂಶ ನಿನ್ನ ಭಾಗ್ಯವಾಗಿ ನಿನ್ನಲ್ಲಿ ಬಂದಿದೆ. ಈ ನಿನ್ನ ಸಂಗೀತಲಾಲಸೆಯನ್ನು ಕಂಡು ಎಳೆತನದಿಂದಲೆ ಆ ಕಲೆಯನ್ನು ಪೋಷಿಸಲು ತಕ್ಕ ಆಚಾರ್ಯರನ್ನು ಯೋಜಿಸಿದ್ದೇನೆ. ಮುಂದೆ ನಿನ್ನಲ್ಲಿ ನೃತ್ಯದ ಅಭಿರುಚಿಯೂ ಹುಟ್ಟಿತು. ಅದನ್ನೂ ನೀನು ಆತ್ಮಸಾತ್ ಮಾಡಿಕೊಂಡಿರುವೆ. ಈಗ ಯಾವ ವಸ್ತುವಿನ ಅಭಿನಯ ನಡೆದಿದೆ, ಮಗು?''

''ಕಾಲಿಯಾ ಮರ್ದನ. ನೃತ್ಯದಲ್ಲಿಯ ನನ್ನ ಆಸಕ್ತಿಗೆ ಮುಖ್ಯ ಕಾರಣವಾದವರು ಐರಿಯ ತಾಯಾರರು. ಅವರು ನನಗೆ ತಾಯಿ ಅಂದರೂ ಅಹುದು, ಗುರು ಅಂದರೂ ಅಹುದು. ಹೆತ್ತವ್ವೆಯನ್ನು ಅಗಲಿದ ನನಗೆ

ಹೆತ್ತವ್ವೆಗಿಂತಲೂ ಹತ್ತಿರವಾಗಿದ್ದಾರೆ. ನನ್ನ ಮೇಲೆ ಅವರ ಅಕ್ಕರೆ ಅಷ್ಟಿಷ್ಟಲ್ಲ. ಎಷ್ಟು ಪ್ರೀತಿಯಿಂದ ಸೂಕ್ಷ್ಮವಾಗಿ ಹೇಳಿಕೊಡುತ್ತಾರೆ! ಅವರಷ್ಟು ನಯವಾಗಿ ಅಭಿನಯಿಸುವವರನ್ನು ಕಾಣಲೇ ಇಲ್ಲ."

"ಹೆಸರಿಗೆ ತಕ್ಕಂತೆ ಕಲೆಗಳು ಅವಳಲ್ಲಿ ಮನೆಮಾಡಿಕೊಂಡಿವೆ. ಚಂದ್ರಲೇಖೆ! ಕಲೆಗಾಗಿ ಜೀವನವನ್ನು ಮೀಸಲಾಗಿಸಿದ ಉತ್ತಮ ಜೀವಿ. ವಿದ್ಯಾಧರ ವಂಶದಲ್ಲಿ ಜನಿಸಿದ ಅವಳು ಕಲಾಧರಿಯಾದುದು ಆಚ್ಚರಿಯಲ್ಲ. ಮಹಾಮಹಾ ನಾಟ್ಯಾಚಾರ್ಯರಿಂದ ಪ್ರಶಸ್ತಿಯನ್ನು ಪಡೆದು ನೃತ್ಯವಿದ್ಯಾಧರಿ ಎಂದು ಖ್ಯಾತಿವೆತ್ತಿರುವಳು. ಅವಳ ಸಹವಾಸದಿಂದ ನಿನಗೆ ಬಹಳ ಉಪಕಾರವಾಗಿದೆ."

"ಅಪ್ಪ, ವಿದ್ಯೆ, ಕಲೆ, ರೂಪ, ರಾಜಕೀಯ ಕರ್ತೃತ್ವ ಮುಂತಾದ ಬಹು, ಗುಣಗಳಿಗೆ ತವರಾದ ಅವರು ಮಹಿಳೆಯರಿಗೆ ನಿತ್ಯ ಆದರ್ಶವಾಗಿದ್ದಾರೆ."

"ಮಗು, ನಮ್ಮ ಕುಲದ ಹಿರಿಮೆ ಅದು. ಈ ಚಾಲುಕ್ಯವಂಶದಲ್ಲಿ ವಿದ್ಯಾವತಿಯರು, ಕಲಾವತಿಯರು, ರಾಜನೀತಿ ಚತುರೆಯರು ಆದ ಅನೇಕ ನಾರಿಯರು ನಾಮಾಂಕಿತರಾಗಿದ್ದಾರೆ. ಮುತ್ತಜ್ಜಿ ಅಕ್ಕಾದೇವಿಯ ಚರಿತ್ರೆ ನಿನಗೆ ತಿಳಿದುದು. ನನ್ನ ತಾಯಂದಿರಲ್ಲಿ ಹಲವರು ರಾಜ್ಯಭಾರ ನಡೆಸಿದರು. ನಿನ್ನ ತಾಯಾರರಲ್ಲಿಯೂ ಅನೇಕರು ಅಂತಹರು."

"ಅಪ್ಪ, ಈ ನಮ್ಮ ಕುಲದ ಅಕಲಂಕ ಕೀರ್ತಿ ದೀಪಾಳಿಯ ದಿವ್ಯ ದೀಪ್ತಿಯಂತೆ ಸದಾ ಸಂತೋಷಪ್ರದವಾಗಿ ಶೋಭಿಸುತ್ತಿರುವುದು. ನಮ್ಮವರ ಒಂದೊಂದು ಮಹಾಕೃತಿಗಳು ಈ ಜ್ಯೋತಿಯೊಳಗಿನ ಒಂದೊಂದು ದೀಪ. ಇವೆಲ್ಲದರಲ್ಲಿ ಅಪ್ಪ, ತಾವೂ ಜಯಶಾಲಿಯಾದ ತಮ್ಮ ಬಾಳಿನಿಂದ ನೀಡಿದ ಬೆಳಕು ನನ್ನ ಕಣ್ಣಿಗೆ ಹೆಚ್ಚು ಉಜ್ಜಲವಾಗಿ ತೋರುತಲಿದೆ. ತಮ್ಮ ಧುರಂಧರ ಜೀವನದ ಒಂದೊಂದು ಸನ್ನಿವೇಶವೂ ಮಹತ್ತ್ವಪೂರ್ಣವಾದುದು. ಇನ್ನೂ ಎಳವರೆಯಲ್ಲಿಯೇ ತಾತರ ವಿಶ್ವಾಸಪಾತ್ರರಾಗಿ ಬನವಾಸಿ, ಗಂಗವಾಡಿಯಂತಹ ಮಹಾ ಮಂಡಲಗಳ ರಾಜ್ಯಭಾರವನ್ನು ನಿರ್ವಹಿಸಿದುದು; ಚೋಳರಾಜ್ಯದ ಗಲಭೆಯನ್ನು ನಂದಿಸಿದುದು; ರಾಜೇಂದ್ರ ಚೋಳನ ಕುತಂತ್ರಗಳನ್ನು ಮುರಿದುದು; ಸಾತವಾಹನ ಅರಸರಂತೆ ವಿಸ್ತಾರ

ವಾದ ಕುಂತಲ ದೇಶಕ್ಕೆ ಒಡೆಯರಾಗಿ ಕುಂತಲೇಶ್ವರ ಎಂಬ ಅನ್ವರ್ಥಕ ಪದವಿಯನ್ನು ಎತ್ತಿದುದು ; ಪರಕೀಯ ರಾಜರಿಂದ ಸ್ಥಾಪಿತವಾಗಿ, ಹೇಗೋ ಅಂಧಾನುಕರಣದಿಂದ ನಡೆದು ಬಂದ ಶತಕಾಲ ಗಣನೆಯನ್ನು ತೊಡೆದು ಹಾಕಿ, ತಮ್ಮ ಹೆಸರಿನ 'ಚಾಲುಕ್ಯವಿಕ್ರಮವರ್ಷ' ಎಂಬ ಹೊಸ ಕಾಲ ಗಣನೆಯನ್ನು ಪ್ರಾರಂಭಿಸಿ, ಯುಧಿಷ್ಠಿರ, ಉಜ್ಜಯಿನಿಯ ವಿಕ್ರಮಾದಿತ್ಯ, ಮೊದಲಾದ ನಾಮಾಂಕಿತ 'ಶಕಕರ್ತಾರರ' ಅಗ್ರಪಂಕ್ತಿಯಲ್ಲಿ ಅಲಂಕರಿಸಿ ದುದು; ನೊಳಂಬವಾಡಿ ನಾಡನ್ನು ಚೋಳರ ಆಕ್ರಮಣದಿಂದ ಬಿಡಿಸಿದುದು ; ಉತ್ತರ ದೇಶಕ್ಕೆ ದಂಡಯಾತ್ರೆಗಳನ್ನು ಎತ್ತಿಕೊಂಡು, ನರ್ಮದೆಯನ್ನು ದಾಟಿ, ಮಧ್ಯಭಾರತದ ರಾಜರನ್ನು ತಗ್ಗಿಸಿದುದು ; ಕುಂತಲ ರಾಷ್ಟ್ರದಲ್ಲಿ ಶಾಂತಿಯ ಸಾಮ್ರಾಜ್ಯವನ್ನು ನೆಲೆಗೊಳಿಸಿದುದು ; ವಿದ್ಯೆ ಕಲೆಗಳನ್ನು ಸಂವರ್ಧಿಸಿದುದು ; ಸರ್ವಧರ್ಮ ಮತಗಳಿಗೆ ಪೋಷಣೆಯಿತ್ತು ಅವು ನೆಮ್ಮದಿಯಾಗಿ ಬಾಳುವಂತೆ ಮಾಡಿದುದು ; ಅಗಣಿತ ಮಹಾದಾನಗಳನ್ನು ನೀಡುತ್ತ ಧಾರ್ಮಿಕರನ್ನು, ವಿದ್ಯಾವಂತರನ್ನು, ಕಲಾಕುಶಲರನ್ನು ಪ್ರೋತ್ಸಾಹಿಸಿದುದು ; ಅಪ್ಪ, ಒಂದೇ ಎರಡೇ, ತಮ್ಮ ಜೀವನದ ಇಂತಹ ಅಮಿತ ಸಂವಿಧಾನಗಳು ನಮ್ಮ ಕುಲ ಕ್ಕಂತೂ ಸರಿ, ನಮ್ಮ ನಾಡಿಗೂ ನಮ್ಮ ಜನಾಂಗಕ್ಕೂ ಚಿರಕಾಲ ಭೂಷಣ ವಾಗಿವೆ.''

''ವತ್ಸೆ, ಅದಿರಲಿ. ಇಷ್ಟರಿಂದ ನನ್ನ ಜೀವನವು ಧನ್ಯವಾಯಿತು ಎಂದು ನಾನು ಭಾವಿಸಿಲ್ಲ. ನನ್ನೀ ಜೀವನದಲ್ಲಿ ನಾನು ಹಲವಾರು ಹೋರಾಟಗಳನ್ನು ಹೂಡಿ ಹೊರಗಾಣಿಸಿದ್ದೇನೆ. ಹೋರಾಟ ಬಂದಾಗ ಹೋರಾಡಬೇಕಾದುದೇ. ಆದರೆ ಹೋರಾಟವೇ ಬಾಳಿನ ಗುರಿ ಅಲ್ಲ, ಬಾಳಿನ ಗುರಿ ನೆಮ್ಮದಿ. ಎರಡು ವರ್ಷಗಳ ಆಚೆ ಬನವಸೆ ನಾಡಿನಲ್ಲಿ ಸಂಚರಿಸುತ್ತ ಬಳ್ಳಿಗಾವೆಗೆ ಹೋದೆನು. ರಮಣೀಯವಾದ ವಸಂತಕಾಲದ ಕೆಲದಿನಗಳನ್ನು ಅಲ್ಲಿಯೇ ಕಳೆದೆನು. ಅಲ್ಲಿರು ವಾಗ ಶಕ್ತಿಪರ ಲಕುಲೀಶ ಮಠದ ಸೋಮೇಶ್ವರ ಯತಿಗಳ ನಿಕಟ ಪರಿಚಯ ಸಮಾಗಮದ ಲಾಭ ನನಗೆ ದೊರೆತಿತು. ಅಧ್ಯಾತ್ಮದಲ್ಲಿ ನಿಮಗ್ನರಾದ ಅವರು ಸಮರಗಳಿಂದ ಉಂಟಾಗುವ ತ್ರಿವಿಧ ಅನರ್ಥಗಳನ್ನು ಹೃದಯವಿದಾರಕವಾಗಿ ನಿರೂಪಿಸಿದರು. ಅಹಿಂಸೆಯಿಂದ ಸ್ಥಾಪಿತವಾದ ಶಾಂತಿ ಲೋಕವನ್ನು ಸಂಜೀ ವನಗೊಳಿಸುವ ಸುಧೆ ; ಹಿಂಸಾಮಯ ಯುದ್ಧವು ಮಾನವಕೋಟಿಯನ್ನು

ಅಧೋಗತಿಗೆ ಇಳಿಸುವ ವಿಷ; ಮುಂತಾಗಿ ಅವರು ಬೋಧಿಸಿದರು. ಅಂದಿನಿಂದ ಯುದ್ಧದ ಬಗೆಗೆ ನನ್ನಲ್ಲಿ ಹೆಚ್ಚಿನ ಜುಗುಪ್ಸೆ ಉಂಟಾಗಿದೆ.''

"ಅಪ್ಪ, ಅದು ಸರಿ. ಕೇವಲ ಆತ್ಮಸಾಧನೆಯಲ್ಲಿ ನಿರತರಾದವರಿಗೆ ಹೀಗೆ ಉಪದೇಶ ಮಾಡುವುದೂ ಅದರಂತೆ ಆಚರಿಸುವುದೂ ಸಾಧ್ಯವಿರಬಹುದು. ಆದರೆ ವಿಷಮವಾದ ರಾಜಕೀಯ ರಂಗದಲ್ಲಿ ನಿತ್ಯ ಶ್ರಮಿಸುವವರಿಗೆ ಇದರ ಆಚರಣೆ ಹೇಗೆ ತಾನೆ ಸಾಧ್ಯ ? ತನಗೆ ಇಷ್ಟವಿಲ್ಲದಿದ್ದರೂ ಹಗೆಗಳು ಬಂದು ಹೊಂಚುಹಾಕಿ ಘಾತುಕತನದಿಂದ ಏರಾಟಮಾಡಿದರೆ, ಪ್ರಜಾಪಾಲನೆಯ ಹೊಣೆಯನ್ನು ವಹಿಸಿದ ಪ್ರಭುವಾದವನು ಸುಮ್ಮನೆ ಶಾಂತಿಯಿಂದ ಕೂರುವುದು ಶಕ್ಯವೇ ? ಯುಕ್ತವೇ ?"

''ನಿಜ, ಮಾಲೆ ! ಇದುವರೆಗೆ ನಾನು ನಾನಾಗಿ ಸಮರಾಂಗಣಕ್ಕೆ ಧುಮುಕಲಿಲ್ಲ. ಆದರೆ ಸಮರಧೂಮವು ಎದ್ದು ನನ್ನನ್ನು ಆವರಿಸಿಕೊಳ್ಳಲಿಕ್ಕೆ ಬರಲು, ಅದನ್ನು ಹಾರಿಸಿಬಿಡಲು ಮಾತ್ರ ನಾನು ಆಗಾಗ ಹೋರಾಡಿದ್ದೇನೆ. ನನ್ನ ರಾಷ್ಟ್ರದಲ್ಲಿ ಶಾಂತಿ ನೆಲಸಲಿ; ನನ್ನ ಪ್ರಜೆಗಳು ಸುಖದಿಂದ ಬಾಳಲಿ ; ಎಂದು ಅವರ ಹಿತದ ಹಲವು ಯೋಜನೆಗಳನ್ನು ಕೈಕೊಂಡು ಕೊನೆಗಾಣಿಸಲು ಶ್ರಮಿಸುತ್ತಲಿದ್ದೇನೆ. ಆದರೆ ನನ್ನ ಎಣಿಕೆಗಳು, ನನ್ನ ಸಾಹಸಗಳು ಸಾಕಷ್ಟು ಜಯಶಾಲಿ ಆಗುತ್ತ ಇಲ್ಲ ಎಂಬುದು ವಿಷಾದಕರ. ಅಕಲ್ಪಿತ ಅವಾಂತರಗಳು ಉದ್ಭವಿಸುತಲಿವೆ. ಉತ್ತರ ಮತ್ತು ದಕ್ಷಿಣ ಭಾರತದ ದಂಡಯಾತ್ರೆಗಳು ನೆರವೇರಿದಂದಿನಿಂದ ನನ್ನ ರಾಷ್ಟ್ರಕ್ಕೆ ಪರಚಕ್ರದ ಭಯವಿಲ್ಲದಂತಾಗಿ ಶಾಂತಿಯ ಜೀವನಕ್ಕೆ ಹೆಚ್ಚು ಅನುಕೂಲವಾಗಬೇಕಾಗಿದ್ದಿತು. ಆದರೆ ಯಾವ ನನ್ನ ಆಪ್ತರು, ಅಂಕಿತರು, ಸಾಮಂತರು, ಮಂಡಲಾಧಿಕಾರಿಗಳು ಇವರಿಂದ ರಾಷ್ಟ್ರದ ಶಾಂತಿಯನ್ನು ಕಾಪಾಡುವ ಕಾರ್ಯದಲ್ಲಿ ನಾನು ಹೆಚ್ಚಿನ ಸಹಕಾರವನ್ನು ಹಾರೈಸಿದ್ದೆನೋ ಅಂತಹರು ಕೆಲರು ಅದನ್ನು ವಿನಾಶಗೊಳಿಸಲು ಆಗಾಗ ಪ್ರಯತ್ನಿಸುತ್ತಿದ್ದುದು ಅತ್ಯಂತ ಉದ್ವೇಗಕರವಾಗಿದೆ. ನನ್ನ ತಮ್ಮ ಜಯಸಿಂಹನ ವಿದ್ರೋಹದ ಕತೆ ನಿನಗೆ ತಿಳಿಯದು.

'ಸಾಮ್ರಾಜ್ಯದ ದಕ್ಷಿಣ ದೆಸೆಗೆ ತಮಿಳುನಾಡು ನೆಲೆಸಿದ್ದು, ಅಲ್ಲಿಯ ಚೋಳರಸರಿಂದ ನಮ್ಮ ರಾಷ್ಟ್ರಕ್ಕೆ ಮೇಲಿಂದ ಮೇಲೆ ಉಪದ್ರವ ಎಡೆಯುತ್ತಿದ್ದಿತು. ಆದರೆ ಗಂಗವಾಡಿಯಲ್ಲಿ ಉದಿತೋದಿತರಾದ ಹೊಯ್ಸಳರ ಪ್ರಾಬಲ್ಯ

ಮೂಲಕ ಈ ಚೋಳರ ಸದ್ದು ಅಡಗಿತು ಎಂದು ಸಂತೋಷಪಟ್ಟಿದ್ದೆನು. ಹೊಯ್ಸಳ ಬಿಟ್ಟಿದೇವ ಬಲುಗಟ್ಟಿಗ. ಗಂಗವಾಡಿಯಿಂದ ಚೋಳರ ಬೇರನ್ನು ಕಿತ್ತಿಸೆದು, ರಾಮೇಶ್ವರದ ವರೆಗೆ ಅವರನ್ನು ಬಡಿದಟ್ಟುವಲ್ಲಿ ಆತನು ತೋರಿಸಿದ ಶೌರ್ಯ ಸಾಹಸಗಳು ಮೆಚ್ಚುವಂತಹವು. ಆತನ ಈ ಕೃತಿಯಿಂದ ಸಾಮ್ರಾಜ್ಯಕ್ಕೆ ಉಪಕಾರವೇ ಆಯಿತು. ಇದುವರೆಗೆ ಆತನು ನಮ್ಮೊಡನೆ ಸ್ನೇಹವಾಗಿಯೇ ವರ್ತಿಸಿದನು. ನನ್ನದಾದರೂ ಆತನ ಮೇಲೆ ಯಾವ ಬಲವಂತವೂ ಇರಲಿಲ್ಲ. ಹೆಸರಿಗೆ ಮಾಂಡಲಿಕನೆನಿಸಿದರೂ ಸ್ವತಂತ್ರನಾಗಿಯೇ ಇದ್ದನು. ಆದರೆ ಈ ವಿಜಯಗಳಿಂದ ಆತನ ತಲೆ ತಿರುಗಿ ಹೋದಂತೆ ಆಗಿದೆ. ತಾನೂ ಒಬ್ಬ ಚಕ್ರಾಧಿಪತಿ ಎನಿಸಿಕೊಳ್ಳಬಾರದೇಕೆ ಎಂಬ ಗಾಳಿ ಇದೀಗ ಆತನಲ್ಲಿ ಸೇರಿ ಆತನು ನನಗೆ ವಿರೋಧವಾಗಿ ವರ್ತಿಸಲು ಆರಂಭಿಸಿರುವನು.

ಬಿಟ್ಟಿಗನ ಈ ವಿರೋಧ ನೆಲೆಯನ್ನು ಕಂಡು ತೆಂಕಣ ನಾಡಿನಲ್ಲಿ ವ್ಯವಸ್ಥೆಯನ್ನು ಮಾಡಲು ಈಗ ಕೆಲ ದಿನಗಳ ಹಿಂದೆ ನಾನು ಹನ್ನೆರಡು ಸಾಮಂತರ ಪಡೆಗಳೊಂದಿಗೆ ಗಂಗವಾಡಿಯಲ್ಲಿ ಸಂಚರಿಸುತ್ತಿದ್ದೆನು. ಹಾಸನ ಬಳಿಯ ಕಣ್ಣೆಗಾಲ ಗ್ರಾಮದಲ್ಲಿ ಒಂದು ದಿನ ಬೀಡು ಬಿಟ್ಟೆನು. ನನ್ನ ಚಲನವಲನಗಳನ್ನು ಗುಪ್ತಚಾರರ ಮೂಲಕ ತಿಳಿದುಕೊಳ್ಳುತ್ತಿದ್ದ ಬಿಟ್ಟಿಗನು ತನ್ನ ವಿಶ್ವಸ್ತ ದಂಡಾಧಿಪತಿ ಗಂಗರಾಜನನ್ನು ಹೊತ್ತು ನೋಡಿ ನನ್ನ ಮೇಲೆ ಕೈಯೆತ್ತಲು ಪ್ರೇರಿಸಿದನು. ಒಂದು ಕಾರ್ಗಾಲ ಕೃಷ್ಣ ರಾತ್ರಿ ; ಅಮಾವಾಸ್ಯೆಯ ಕಟ್ಟಿರುಳು. ಮುಗಿಲು ಮೋಡಗಳಿಂದಲೂ ನೆಲ ಕಗ್ಗತ್ತಲೆಯಿಂದಲೂ ಕವಿದಿದ್ದಿತು. ನನ್ನ ಸೈನ್ಯದವರು ಅಜಾಗರೂಕರಾಗಿದ್ದರು ; ಕಾವಲುಗಾರರು ತೂಕಡಿಸುತ್ತಿದ್ದರು. ಇಂತಹ ಸಮಯದಲ್ಲಿ ನಡು ರಾತ್ರಿ ಇದ್ದಕ್ಕಿದ್ದ ಹಾಗೆ 'ಖಟ್–ಖಣಲ್–ಖಟ್' ಎಂಬ ಕೈದುಗಳ ತಾಕಲಾಟದ ಸದ್ದು ಕೇಳಿಸಿತು. ಸ್ವಲ್ಪ ಹೊತ್ತಿನಲ್ಲಿ ಈ ಗಲಭೆ ಪಾಳ್ಯವನ್ನೆಲ್ಲ ಆವರಿಸಿತು. ಭಯಸೂಚಕ ಕಹಳೆಗಳು ಕಿರಚಿದುವು. ಕದನತಾಂಡವು ರೌದ್ರವಾಗಿ ಅಂಡಲೆಯಿತು. ಮೈಮರೆತಿರುವಾಗ ಮಾರಿಯಂತೆ ಮೈಮೇಲೆ ಎರಗಿದ ವೈರಿಯನ್ನು ಇದುರಿಸುವುದು ನಮ್ಮ ದಂಡಿನವರಿಗೆ ದುಸ್ತರವಾಯಿತು. ಕಗ್ಗೊಲೆ ರಭಸದಿಂದ ನುಗ್ಗಾಡಿತು. ಹಗೆಯ ಕೈ ಮೇಲಾಯಿತು !''

“ಸಾಮಂತ ಬಿಟ್ಟಿದೇವನು ಹೀಗೆ ಮೋಸದಿಂದ ನಮ್ಮ ಮೇಲೆಯೇ ತಿರುಗಿ ಬಿದ್ದುದು ಅತಿ ಅನುಚಿತ ! ಅಪ್ಪ, ಈ ಸಮಾಚಾರ ರಾಜಧಾನಿಯಲ್ಲಿ ನಮಗೆ ಕೆಲ ದಿನಗಳಾದ ಒಳಿಕ ತಿಳಿಯಿತು. ಆಗ ನನಗೆ ಬಹಳ ಭಯವಾಯಿತು. ಬಿಟ್ಟಿದೇವನ ಈ ದಿಟ್ಟತನವನ್ನು ಕುಟ್ಟಿ ಕೆಡಹುವ ಸಾಮರ್ಥ್ಯ ನಮ್ಮಲ್ಲಿ ಇಲ್ಲವೇ ?”

“ಇದೇ ಮಗು, ಬೇಗನೇ ನೋಡುವಂತೆ, ಹನ್ನೆರಡು ಸಾಮಂತರ ಸಮಕ್ಷದಲ್ಲಿ ನಮ್ಮ ಸಾಮ್ರಾಜ್ಯ ಸೇನೆಗೆ ಸೋಲು ಉಂಟಾದ ಆ ದಿನದಿಂದ ನನ್ನ ಮನಸ್ಸಿನ ಸ್ವಾಸ್ಥ್ಯವು ಹಾಳಾಗಿದೆ. ಬರಿಯ ಇಂತಹ ಕಿರುಕುಳ ಸೋಲಿಗೆ ನಾನು ಮಿಡುಕುವವನಲ್ಲ. ಇದರ ನಿಮಿತ್ತದಿಂದ ಉಂಟಾಗಲಿರುವ ಅನೇಕ ಅನರ್ಥಪರಂಪರೆಗೆ ನಾನು ಮರುಗಬೇಕಾಗಿದೆ. ರಾಜನೀತಿ ಗಹನವಾದುದು. ಸಾಮ್ರಾಜ್ಯದ ಗೌರವವು ನಿತ್ಯ ಅಬಾಧಿತವಾಗಿರುವುದು ಸಾಮ್ರಾಜ್ಯದ ಸುಸ್ಥಿತಿಗೆ ) ಆವಶ್ಯಕ. ಒಬ್ಬ ಸಾಮಂತನು ಸಾಮ್ರಾಜ್ಯ ಶಕ್ತಿಯನ್ನು ಪ್ರತಿಭಟಿಸಿ ಸ್ವಲ್ಪ ಜಯಶೀಲನಾದರೆ ಸಾಕು. ಇಂತಹ ಸಂಧಿಗಾಗಿ ಕಾದಿದ್ದ ಮಿಕ್ಕ ಸಾಮಂತರೂ ಮಾಂಡಲಿಕರೂ ಆತನ ದಾರಿಯನ್ನೇ ಅನುಸರಿಸುವರು. ಬಿಟ್ಟಿಗನು ಸಾಮ್ರಾಜ್ಯ ವಿರೋಧದ ಧ್ವಜವನ್ನು ಎತ್ತುವ ಪೂರ್ವದಲ್ಲಿ ತನ್ನಂತೆ ಪುಂಡಾಟಿಕೆ ಹೂಡುವ ಆಸೆಯುಳ್ಳ ಜೊತೆಗಾರರು ಯಾರಾದರೂ ತನಗೆ ಸಿಕ್ಕುವರೋ ಎಂಬುದನ್ನು ಅರಿತುಕೊಳ್ಳಲು ಸೂಕ್ಷ್ಮವಾಗಿ ಸಂಧಾನದ ಎಳೆಗಳನ್ನು ಬೀಸಿ ನೋಡಿದ್ದನು. ಇಂತಹ ಸ್ನೇಹಿತರು ಕೆಲರು ಆತನಿಗೆ ದೊರೆತಿರುವರು. ಗೋವೆಯ ಕದಂಬ, ನೊಳಂಬವಾಡಿಯ ಪಾಂಡ್ಯ, ಕರಾಡದ ಶಿಲಾಹಾರ ಈ ಮೂವರು ಅರಸರು ಆತನ ತಂತ್ರಕ್ಕೆ ಒಳಪಟ್ಟಿದ್ದು, ಇವರೆಲ್ಲರು ಸೇರಿ ನನ್ನ ವಿರುದ್ಧ ಒಳಸಂಚನ್ನು ಪ್ರಾರಂಭಿಸುವರು ಎಂಬ ವರ್ತಮಾನಗಳು ದಿನ ದಿನವೂ ಬರುತ್ತಲಿವೆ. ‘ಯಾರನ್ನಾದರೂ ಸೋಲಿಸಬಹುದು ; ಆ ಹೊಯ್ಸಳನನ್ನು ಸೋಲಿಸುವುದು ಮಾತ್ರ ಈ ವಿಕ್ರಮಾದಿತ್ಯನಿಗೆ ಸಾಧ್ಯವಿಲ್ಲ.’ ಎಂದು ನಾನು ಅಂದು ಆ ಹನ್ನೆರಡು ಸಾಮಂತರುಗಳ ಮುಂದೆ ನುಡಿದೆನು, ಎಂಬ ಸುಳ್ಳು ಸುದ್ದಿಯನ್ನು ಆತನು ಹುಟ್ಟಿಸಿ, ಅದನ್ನು ಪ್ರಚುರಗೊಳಿಸುತ್ತ ಅನ್ಯ ಸಾಮಂತರು ಮತ್ತು ಸೇನಾನಾಯಕರನ್ನು ತನ್ನ ಕಡೆಗೆ ಒಲಿಸಿಕೊಳ್ಳುತ್ತಿರುವನಂತೆ. ಬಿಟ್ಟಿಗನ ಈ ಬಲೆಗೆ ಕರಾ

ದಡ ಶಿಲಾಹಾರವಂಶದ ಭೋಜನು ಸಿಲುಕಿದುದು ದುರ್ದೈವದ ಸಂಗತಿ. ಈತನು ನನ್ನ ಐರಿಯರಸಿಯೂ ನಿನ್ನ ನಚ್ಚಿನ ತಾಯಾರರೂ ಆದ ಚಂದ್ರಲೇಖೆಯ ಮಲತಮ್ಮನು. ನೊಳಂಬವಾಡಿಯ ಪಾಂಡ್ಯನು ಅಂದಿನ ಆ ಕಣ್ಣೆಗಾಲ ಘಟನೆಯಲ್ಲಿ ನನ್ನನ್ನು ಸೇರಿದ್ದ ಆ ಹನ್ನೆರಡು ವಿಶ್ವಸ್ತ ಸಾಮಂತರಲ್ಲಿ ಒಬ್ಬನಾಗಿದ್ದನು. ಆತನು ಇದೀಗ ನನ್ನ ಮೇಲೆಯೇ ತಿರುಗಿ ನಿಂತಿದ್ದಾನೆ.''

''ಅಪ್ಪ, ಯಾವಾತನು ತಮ್ಮ ಅನೇಕ ಸಂಗ್ರಾಮಗಳಲ್ಲಿ ಭಾಗವಹಿಸಿದವನೋ, ಯಾವಾತನ ಕಾರ್ಯ ಪರಾಕ್ರಮಗಳನ್ನೂ ಜಯಶೀಲತ್ವವನ್ನೂ ತಾವು ಅನೇಕ ಬಾರಿ ನನ್ನ ಮುಂದೆ ವರ್ಣಿಸಿರುವರೋ, ಆತ—ತಮಗೆ ಬಹಳ ವಿಶ್ವಾಸಿಗ, ಎರಂಬರಗೆಯ ಮಹಾ ಮಂಡಳೇಶ್ವರ ಆಚುಗಿ—ಕಣ್ಣೆಗಾಲ ಆ ದುರ್ಘಟನೆಯ ಕಾಲಕ್ಕೆ ತಮ್ಮೊಡನೆ ಇದ್ದಿರಲಿಲ್ಲವೋ ?''

''ಇರಲಿಲ್ಲ ವತ್ಸೆ, ವಿಶ್ರಾಂತಿಗೆಂದು ತನ್ನ ನಾಡಿಗೆ ಹೋಗಿದ್ದನು. ಆ ವಿಷಮದಲ್ಲಿ ನಾನು ಬಹುವಾಗಿ ಆತನನ್ನು ನೆನೆದುಕೊಂಡೆನು. ಮುಂದೆ ಬಿಟ್ಟಿದೇವನ ಆಳವಾದ ಒಳಸಂಚಿನ ಸುಳಿವು ಸ್ಪಷ್ಟವಾಗಿ ತಿಳಿದೊಡನೆ ನಾನು ಆತನನ್ನು ಕರೆಯ ಕಳುಹಿದೆನು. ನನ್ನ ಓಲೆ ಆತನಿಗೆ ತಲುಪಿ, ಆತನು ದಂಡನ್ನು ಅಳವಡಿಸಿಕೊಂಡು ತನ್ನ ರಾಜಧಾನಿಯಿಂದ ಹೊರಟು ಈ ಊರಿಗೆ ಬರಲಿಕ್ಕೆ ಕೆಲಕಾಲವು ಗಡಿಸಿತು. ಇದೀಗ ನಿನ್ನೆಯ ಸಾಯಂಕಾಲವೇ ಆತನು ಇಲ್ಲಿಗೆ ಬಂದಿರುವನು.

''ಅಪ್ಪ, ತುಂಟತನದಿಂದ ಜನಾಂಗದ ಸುಖಶಾಂತಿಯನ್ನು ಹಾಳು ಮಾಡಲು ಹೊಂಚು ಹಾಕಿದ್ದ ಆ ತೋಳಗಳನ್ನು ತುಂಡರಿಸಿ ಚೆಲ್ಲುವ ಕೆಲಸವನ್ನು ನಿಮ್ಮೀ ಸಿಂಗನಿಗೆ ಒಪ್ಪಿಸಬಾರದೇಕೆ ? ಅನೇಕ ಸಮರಗಳಲ್ಲಿ ನಿಮ್ಮ ವಿಜಯ ದುಂದುಭಿಯನ್ನು ಮೊಳಗಿಸಿ ನಿಮಗೆ ಪ್ರಿಯವಾದ 'ತ್ರಿಭುವನ ಮಲ್ಲ ಕೇಸರೀ' ಎಂಬ ಗೌರವದ ಬಿರುದನ್ನು ನಿಮ್ಮಿಂದ ಸಂಪಾದಿಸಿದ ಮಹಾವೀರನೀತ - ಅರಿಯೆಂಬ ಮದಗಜಘಟೆಯ ಗಂಡ ಸ್ಥಳಗಳನ್ನು ಸೀಳಿಹಾಕಲು ಸದಾ ಸಿದ್ಧವಾಗಿರುವ ಇಂತಹ ಹಲವು ಸಿಂಹಗಳು ಕುಂತಲೇಶ್ವರನ ಪಕ್ಕದಲ್ಲಿ ಬಾಳಿರಲು, ಒಬ್ಬನೇಕೆ ನೂರು ಬಿಟ್ಟಿದೇವರೂ ಅವರ ಮೂರು ನೂರು ಸಂಗಡಿಗರೂ ಆರ್ಭಟಿಸಿ ಬಂದು ಏನು ಮಾಡಬಲ್ಲರು ?''

ಅದು ನಿಜ; ಆದರೆ-ವೃಥಾ ಕಲಹ, ಅನೈಕ್ಯತೆ, ಅಶಾಂತಿ, ಸ್ವಜನ ಹಿಂಸೆ, ಇವುಗಳಿಗೆ ಮನಸ್ಸು ಹೇಸುತ್ತದೆ. ಹೇಗಾದರೂ ಸರಿ, ಕರ್ತವ್ಯವನ್ನು ಯಥಾಸ್ಥಿತ ಆಚರಿಸಲೇ ಬೇಕಲ್ಲವೇ ? ದ್ರೋಹಿಗಳನ್ನು ದಂಡಿಸಲೇ ಬೇಕಲ್ಲವೆ? ಇದೀಗ ಬೆಳಗಿನ ಜಾವದಲ್ಲಿ ಗುಪ್ತಚಾರನು ತಂದ ವಾರ್ತೆ ಬಹು ಭಯಪ್ರದವಾಗಿದೆ. ಅದನ್ನು ಕೇಳಿ ನನ್ನ ಬಗೆ ಕದಡಿದೆ. ನಸುವೂ ತಡ ಮಾಡದೆ ದಂಡಯಾತ್ರೆಯನ್ನು ಹೊರಡಿಸಬೇಕಾಗಿದೆ. ಮಧ್ಯಾಹ್ನದಲ್ಲಿ ವಿಶ್ವಸ್ತ ಸಾಮಂತ ಮಂಡಲೇಶ್ವರರ ಸಭೆಯನ್ನು ಕರೆದಿದ್ದೇನೆ. ನಾಡದು ಬಲಿಪ್ರತಿಪದೆಯ ಸುಮುಹೂರ್ತದಲ್ಲಿ ನಮ್ಮ ದಂಡು ರಾಜಧಾನಿಯಿಂದ ಹೊರಬೀಳಲೇ ಬೇಕಾಗಿದೆ.''

''ಅಪ್ಪ, ಬೆಳಗಿನಲ್ಲಿ ತಾವು ಕೇಳಿದ ಆ ಸಮಾಚಾರ ಎಂತಹದು ?''

''ಬಿಟ್ಟಿಗನು ಪ್ರಕಟವಾಗಿಯೇ ಬಂಡಾಯದ ಘೋಷಣೆ ಮಾಡಿ ರಣಕಹಳೆಯನ್ನು ಊದಿರುವನಂತೆ. ಆತನ ದಂಡುಗಳು ಪಾಂಡ್ಯನ ಪಡೆಯನ್ನು ಕೂಡಿಕೊಂಡು ನೊಳಂಬವಾಡಿಯಿಂದ ಬೆಳ್ವಲದ ಕಡೆಗೆ ಸಾಗಿರುವುವಂತೆ. ಇದೇ ಸಮಯಕ್ಕೆ ಅತ್ತ ಉತ್ತರದಿಂದ ಗೋವೆಯ ಕದಂಬ ಮತ್ತು ಕರಾಡದ ಶಿಲಾಹಾರ ಸಾಮಂತರು ನನ್ನ ಆಧಿಪತ್ಯವನ್ನು ಪ್ರತಿಭಟಿಸಿ ಸೈನ್ಯವನ್ನು ಸಜ್ಜುಗೊಳಿಸಿ ನನ್ನ ರಾಜ್ಯದಲ್ಲಿ ಪ್ರವೇಶಿಸಿರುವರಂತೆ.''

''ಅಪ್ಪ, ಈ ಸುದ್ದಿ ಸತ್ಯವಾಗಿದ್ದರೆ ಭಯಪ್ರದವಾದುದು. ವಿರೋಧಿಗಳ ವ್ಯೂಹವು ಪ್ರಬಲವಾಗಿ ತೋರುತ್ತಿದ್ದು ಅದರಿಂದ ನಮ್ಮ ರಾಜ್ಯಕ್ಕೆ ಅಪಾಯ ಸಂಭವಿಸುವಂತಿದೆ.''

''ಈ ಸುದ್ದಿ ಸತ್ಯವೆಂಬಲ್ಲಿ ಸಂದೇಹವಿಲ್ಲ. ಈ ಅನರ್ಥವನ್ನು ತಪ್ಪಿಸಲು ನಾನು ಮಾಡಿದ ಪ್ರಯತ್ನವೆಲ್ಲವೂ ವ್ಯರ್ಥವಾದುದಕ್ಕೆ ನನಗೆ ಬಹಳ ವ್ಯಥೆ ಆಗಿದೆ. ನಿನ್ನೆ ಮಧ್ಯಾಹ್ನ ವಿಜ್ಞಾನೇಶ್ವರ ಯತಿಗಳ ಮಠಕ್ಕೆ ಹೋಗಿದ್ದೆನು. ಅಲ್ಲಿ ಬಹಳ ಹೊತ್ತು ಮಾತಾಡುತ್ತ ಕುಳಿತಿದ್ದೆನು. ಅವರು ಯಾಜ್ಞವಲ್ಕ್ಯ ಸ್ಮೃತಿಯನ್ನು ಆಧರಿಸಿ 'ಮಿತಾಕ್ಷರಾ' ಎಂಬ ಟೀಕಾ ಗ್ರಂಥವನ್ನು ರಚಿಸುತ್ತಿರುವರು. ಅದರೊಳಗಿನ ವಿಷಯಗಳನ್ನು ಚರ್ಚಿಸುತ್ತ ಪ್ರಸ್ತುತ ರಾಜಕೀಯ ಪರಿಸ್ಥಿತಿಯತ್ತ ತಿರುಗಿದೆವು. ಆಗ ಅವರು ಭವಿಷ್ಯತ್ ಸೂಚನೆಯಂತೆ ಕೆಲ

ವಾಕ್ಯಗಳನ್ನು ನುಡಿದರು. ಅವುಗಳು ನನ್ನನ್ನು ಹೆಚ್ಚು ವಿಚಾರಪರನನ್ನು ಮಾಡಿದುವು.''

''ಅಪ್ಪ, ಅವರು ಅಂತಹುದು ಏನನ್ನು ಹೇಳಿದರು ?''

'''ರಾಜನ್, ನಿನ್ನ ಎಣಿಕೆಗಳೆಲ್ಲ ನಿನ್ನ ಇಷ್ಟದಂತೆ ನೆರವೇರಲಿಕ್ಕಿಲ್ಲ. ಶಾಂತಿಗಾಗಿ ಆತುರನಾಗಿದ್ದ ನೀನು ಅಶಾಂತಿಯೊಡನೆ ಹೋರಾಡ ಬೇಕಾದೀತು ! ದಂಡನೀತಿಯೇ ಜಯಮಾಲೆಯನ್ನು ಎತ್ತಿ ತರಲಿಕ್ಕಿಲ್ಲ. ಸಾಮ ನೀತಿಯನ್ನು ಅವಲಂಬಿಸಿ ಸುಕುಮಾರ ಉಪಾಯವನ್ನು ಅಣಿ ಮಾಡುವ ಸಂದರ್ಭ ಬರಬಹುದು.''

''ಹಾಗಂದರೆ ಏನಪ್ಪ?''

''ಅವರಾ ಕೊನೆಯ ಮಾತಿನ ಅಭಿಪ್ರಾಯ ನನಗೆ ಸರಿಯಾಗಿ ಆಗಲಿಲ್ಲ. ಅದೇನೆಂದು ಕೇಳುವ ಧೈರ್ಯವನ್ನು ನಾನು ಮಾಡಲಿಲ್ಲ. ಅವರ ಮಠದಿಂದ ಮರಳಿದಾಗ ಸಾಯಂಕಾಲ ಆಗಿತ್ತು. ಈ ವಿಷಯವನ್ನು ನಿನಗೆ ತಿಳುಹಬೇಕೆಂದು ನಿನ್ನ ಮಂದಿರಕ್ಕೆ ಬಂದೆನು. ಆಗ ನೀನು ಯಾವುದೋ ವಿಚಾರವಾಹಿನಿಗೆ ಸಿಲುಕಿ 'ಕಲೆಗೆ ಧರ್ಮವು ವಿರೋಧಿಯೇ ?' ಎಂಬ ಚರ್ಚೆಯನ್ನು ನನ್ನೊಡನೆ ಆರಂಭಿಸಿದೆ.''

''ನಿಮ್ಮ ಮನಸ್ಸಿನಲ್ಲಿ ಇದ್ದುದು ನನಗೆ ಹೇಗೆ ತಿಳಿಯಬೇಕಪ್ಪ?''

''ಕೆಟ್ಟು ಹೋಗಲಿಲ್ಲ. ಆದಾಗ ಸಮಯವೂ ಆಗಿತ್ತು. ಆದುದರಿಂದ ಇಂದು ಮುಂಜಾವ ನಿನ್ನಲ್ಲಿಗೆ ಬಂದುಬಿಟ್ಟೆನು. ವಿಜ್ಞಾನೇಶ್ವರರು ನುಡಿದ ಆ 'ಸುಕುಮಾರ ಉಪಾಯ' ಎಂಬ ಪದದ ಅಭಿಪ್ರಾಯವು ಇನ್ನೂ ನನಗೆ ತೋಚಲೊಲ್ಲದು.''

''ಇಲ್ಲಿ ನೋಡಿ, ಅಪ್ಪ! 'ರಾಣೀವಾಸದ ಸಹಕಾರ' ಎಂಬ ಅರ್ಥವಾಗಬಹುದೇ ಆ ಮಾತಿಗೆ ? ನಮ್ಮ ಮನೆತನದ ಮಹಿಳೆಯರು ರಾಜಕೀಯದಲ್ಲಿಯೂ ಭಾಗವಹಿಸಿ ರಾಜನೀತಿಗೆ ತಮ್ಮ ಸಹಕಾರವನ್ನು ನೀಡಿದ್ದಾರೆ. ಅಂತಹದೇನಾದರೂ ಸಂದರ್ಭ ಬರಬಹುದು. ಹಾಗೇನಾದರೂ ಒದಗಿದರೆ ನನ್ನ ಜನಾಂಗಕ್ಕಾಗಿ ನಾನು ನನ್ನ ಪರಿಯಿಂದ ಬೇಕಾದ ತ್ಯಾಗವನ್ನು ಮಾಡಲು ಸಿದ್ಧಳು.''

"ವತ್ಸೆ, ನಿನ್ನ ಮನಸ್ಸು ಎಷ್ಟು ಕೋಮಲವಾಗಿದೆ! ನಿನ್ನ ಹೃದಯವು ಅಷ್ಟೇ ಪವಿತ್ರವಾಗಿದೆ! ಆದರೆ, ಹುಚ್ಚಿ! ಈ ಸಂಕಟವನ್ನು ಪ್ರತಿಭಟಿಸಲು ಸಾಮ್ರಾಜ್ಯದ ಸರ್ವಶಕ್ತಿಗಳು ಸಿದ್ಧವಾಗಿರುವಾಗ ನಿನ್ನಂತಹ ಎಳಮಗುವನ್ನು ಹಿಂಸೆಪಡಿಸುವಂತಹ ಸಂದರ್ಭ ಅದಾವುದು? ನೀನೇನು ಕೈದುಹಿಡಿದು ಹೋಗಬೇಕಾಗಿದೆಯೇ?"

"ಅಗತ್ಯವಿದ್ದಾಗ ಚಾಲುಕ್ಯ ಕುಲದ ಅಂಗನೆಯರು ಅದನ್ನು ಮಾಡಿರುವರು, ಮಾಡಬಲ್ಲರು."

"ಸಂದೇಹವೇನು? ಮಗು, ನಸು ಹಿಂದೆ ಆ ದೀಪಾವಳಿಯ ದೀಪ್ತಿಯನ್ನು ಬಣ್ಣಿಸುತ್ತಿದ್ದೆ ಅಲ್ಲವೆ ನೀನು? ಇದೀಗ ನೋಡು; ದೀಪಾವಳಿಯ ಸಂನಿವೇಶವೇ ಬೇರೆ ಆಗಿದೆ! ಸಮರ ಸನ್ನದ್ಧರಾದ ಸೈನಿಕರ ಅಸಂಖ್ಯ ಆಯುಧಗಳ ತೇಜಸ್ಸಿನ ಮುಂದೆ ಈ ಸಲದ ದೀಪಾಳಿಯ ಬೆಳಕು ಮಸಕು ಮಸಕು. ಅದರಿಂದಾಗಿ ಈ ಬಾಹ್ಯ ಪ್ರಪಂಚದ ಪ್ರತಿಬಿಂಬವು ಮಾಡಿದ ನನ್ನೀ ಬಗೆಗನ್ನಡಿಯ ಬೆಳಕೂ ಮಸಕು ಮಸಕು!"

"ಅಪ್ಪ, ಮಸಕಾದ ದೀಪವನ್ನು ಬೆಳಗಿಸುವುದು ಬಹು ಕಷ್ಟವಲ್ಲ. ಕುಡಿಯನ್ನು ತೆಗೆದರೆ ತೀರಿತು. ಈ ದೀಪಾವಳಿಯ ಬೆಳಕಿಗೆ ಬಂದ ಕುಡಿಯನ್ನು ನಮ್ಮ ವೀರರು ತಮ್ಮ ಆಯುಧಗಳ ಮೊನೆಯಿಂದ ಕಡಿದು ಬಿಸುಡಲಿ ಅಂದರೆ ಈ ದೀಪಾವಳಿಯ ದೀಪ್ತಿ ಆ ಶಸ್ತ್ರಾಸ್ತ್ರಗಳ ಪ್ರಭೆಗಿಂತಲೂ ಮಿಗಿಲಾಗಿ ಬಹುಕಾಲ ಪ್ರಕಾಶಿಸುವುದು."

"ಹಾಗೆಯೇ ಆಗಲಿ ವತ್ಸೆ!"

ವಿಕ್ರಮಾದಿತ್ಯನು ಹೊರಗೆ ಬರಲು, ಸೇವಕನು ಕೈಜೋಡಿಸಿ, 'ಮಹಾಸ್ವಾಮಿ, ತಮ್ಮ ಸಂದರ್ಶನಕ್ಕಾಗಿ ಯಾರೋ ಬಂದಿರುವರು, ಅತಿಥಿ ಗೃಹದಲ್ಲಿ ಕಾಯುತ್ತಿರುವರು' ಎಂಬ ಸಮಾಚಾರವನ್ನು ಅರುಹಿದನು.

---

## ಕಿರಣ ಆರು

# ಮಹಾಮಂಡಲೇಶ್ವರ

ಅಂದು ಮಧ್ಯಾಹ್ನ ಮೂರನೆಯ ಜಾವದಲ್ಲಿ ಮಂತ್ರಾಲೋಚನ ಸಭೆ ನೆರೆಯಿತು. ಅರಮನೆಯ ಅಂತರ್ಭಾಗದ ಓಲಗಶಾಲೆಯಲ್ಲಿ ವಿಶ್ವಸ್ತ ಮಂತ್ರಿಗಳೂ ಸಾಮಂತರೂ ಮಂಡಲಾಧಿಕಾರಿಗಳೂ ದಂಡನಾಯಕರೂ ಸೇರಿದ್ದರು. ಲಕ್ಷಾಂತರ ಜನಗಳ ಹಿತಾಹಿತವನ್ನು ಸಂಬಂಧಿಸಿದ, ಜನಾಂಗದ ಮೇಲೆ ಒದಗಿದ ಮಹತ್ತರವಾದ ಒಂದು ವಿಪತ್ತಿಯನ್ನು ಕುರಿತು ತಕ್ಕ ಉಪಾಯ ಯೋಜನೆಯನ್ನು ಅಲ್ಲಿ ಕೈಕೊಳ್ಳಬೇಕಾಗಿದ್ದುದರಿಂದ ಎಲ್ಲರ ಹೃದಯಗಳು ಅನಿಶ್ಚಯ, ಸಂದೇಹ, ಭೀತಿ, ಭವಿತವ್ಯದ ಚಿಂತೆಯಿಂದ ಮಿಡಿಯುತ್ತಿದ್ದುವು. ತ್ವರಿತ ತೀರ್ಮಾನ ಮತ್ತು ಉಚಿತ ಅನುಷ್ಠಾನಕ್ಕಾಗಿ ಎಲ್ಲರೂ ಉತ್ಕಂಠಿತರಾಗಿದ್ದರು. ಅವರು ಹೆಚ್ಚು ಹೊತ್ತು ಕಾಯಬೇಕಾಗಲಿಲ್ಲ. ನಿಯಮಿತ ಗಳಿಗೆಗೆ ಸರಿಯಾಗಿ ವಿಕ್ರಮಾದಿತ್ಯನು ಬಂದುಬಿಟ್ಟನು. ಎಲ್ಲರೂ ಆತನಿಗೆ ಉತ್ಥಾಪನ ಕೊಟ್ಟು ತಮ್ಮ ತಮ್ಮ ಆಸನಗಳಲ್ಲಿ ಕುಳಿತುಕೊಂಡರು. ತನ್ನ ಆಸನವನ್ನು ಅಲಂಕರಿಸುತ್ತ ಕುಂತಲೇಶ್ವರನು ಕೂಡಲೆ ಮಂತಾಲೋಚನೆಯನ್ನು ಪ್ರಸ್ತಾಪಿಸಿದನು.

"ಮಾನ್ಯರೇ, ನನ್ನ ಪ್ರಿಯ ವಿಶ್ವಸ್ತರೇ, ರಾಜ್ಯಾಂಗಕ್ಕೆ ಸೇರಿದವರಾದ ತಮ್ಮೆಲ್ಲರಿಗೂ ಇದೀಗಿನ ರಾಜಕೀಯ ಪರಿಸ್ಥಿತಿಯ ವಿವರಗಳು ತಿಳಿದಿರಲು ಸಾಕು. ತಮ್ಮ ಜನಾಂಗಕ್ಕೆ ನುಗ್ಗಿರುವ ಈ ಅನಾಹುತದ ಯಥಾರ್ಥ ಸ್ವರೂಪವನ್ನು ನಾನು ತಮಗೆ ವಿಂಗಡಿಸಿ ಹೇಳುವ ಅಗತ್ಯವಿಲ್ಲ. ಸಾಮ್ರಾಜ್ಯ ದ್ರೋಹದ ಈ ಬೇನೆಯನ್ನು ವಿಲಂಬಮಾಡದೆ ನಂದಿಸುವುದು ಕ್ಷೇಮಕರ. ಅದಕ್ಕಾಗಿ ತಾತ್ಕಾಲಿಕವೂ ತೀಕ್ಷ್ಣವೂ ಆದ ಉಪಾಯಗಳನ್ನು ಕೈಕೊಳ್ಳಬೇಕಾದುದು. ಹೀಗಿದ್ದುದರಿಂದ ಇತರ ಸಮಯಗಳಲ್ಲಿ ಅನುಸರಿಸುವ ಕೆಲವು ಔಪಚಾರಿಕ ನಿಯಮುಗಳಿಗೆ ಈ ಹೊತ್ತು ಸಂಕ್ಷೇಪ ಬಂದರೆ ತಾವು ಮುನ್ನಿಸುವಿರಾಗಿ ನಂಬಿದ್ದೇವೆ.

"ರಾಷ್ಟ್ರವಿಘಾತಕವಾದ ಈ ದಳ್ಳುರಿಯನ್ನು ಧ್ವಂಸಮಾಡುವ ಕ್ರಮದಲ್ಲಿ ಎರಡು ವಿಧಾನಗಳುಂಟು. ಒಂದು ವಿರೋಧ ಮತ್ತು ಇನ್ನೊಂದು

ಪ್ರತೀಕಾರ. ಒಂದನೆಯದಾಗಿ ಬಂಡಾಯದ ಈ ಸೊಗಡು ಬೇರೆಯವರಿಗೆ ಸೋಂಕಿ ಹೆಚ್ಚಾಗಿ ಹಬ್ಬದಂತೆ ನೋಡಿಕೊಳ್ಳುವುದು. ಈ ಕಾರ್ಯದಲ್ಲಿ ದೊಂಬಿಯನ್ನು ಎಬ್ಬಿಸಿದ ನಾಯಕರ ನೆರೆಯ ನಾಡಿನ ಅಧಿಕಾರಿಗಳು ಬಹಳ ದಕ್ಷತೆಯನ್ನು ವಹಿಸತಕ್ಕದ್ದು. ಈ ಸಂದರ್ಭದಲ್ಲಿ ಪಾನುಂಗಲ್ ನಾಡಿನ ಮಹಾ ಮಂಡಲೇಶ್ವರ ತೈಲಮರಸರಿಂದ ನಾನು ಹೆಚ್ಚಿನ ಸಹಕಾರವನ್ನು ಅಪೇಕ್ಷಿಸುವೆ. ಏಕೆಂದರೆ ಇವರು ಬಿಟ್ಟಿದೇವನ ಗಂಗವಾಡಿ ನಾಡಿಗೂ ಕಾದಂಬ ಜಯಕೇಸಿಯ ಗೋವಾ ಪ್ರಾಂತ್ಯಕ್ಕೂ ನೆರೆಯವರಾಗಿದ್ದು ಆ ಇಬ್ಬರು ದಂಗೆಗಾರರ ಆಕ್ರಮಣವನ್ನು ತಡೆದು ನಿಲ್ಲಿಸಬಲ್ಲರು. ಅಲ್ಲವೇ ?''

"ಚಕ್ರೇಶ್ವರರ ಮಹದಾಜ್ಞೆ. ವಿಕ್ರಮಾದಿತ್ಯನು ಗಕ್ಕನೆ ಮಾತನ್ನು ನಿಲ್ಲಿಸಿ ಮೊನೆಯಾದ ತನ್ನ ನೋಟವನ್ನು ತೈಲಮರಸನ ಮುಖದ ಮೇಲೆ ಊರಿದನು. ಸಂತೋಷದಿಂದ ನಾನೀ ಹೊಣೆಯನ್ನು ವಹಿಸುವೆ ಈ ಕಾರ್ಯವನ್ನು ನನಗೆ ಒಪ್ಪಿಸಿಕೊಡಬೇಕೆಂದು ಇದೀಗ ನಾನು ತಮಗೆ ಬಿನ್ನವಿಸಿಕೊಳ್ಳಬೇಕೆಂದು ಬಗೆದಿದ್ದೆನು. ಇನ್ನು ಪ್ರಭುಗಳೇ ತಾವಾಗಿ ಅಪ್ಪಣೆ ಕೊಡಿಸಿದ ಬಳಿಕ ಹೆಚ್ಚು ಮಾತೇಕೆ ?'' ಪಾನುಂಗಲ್ ನಾಡಿನ ಕಾದಂಬ ಕುಲದ ಮಹಾ ಮಂಡಲೇಶ್ವರ ತೈಲಮರಸನು ಎದ್ದು ನಿಂತು ವಿನಯವಾಗಿ ನುಡಿದು ಕುಳಿತುಕೊಂಡನು.

''ವೀರಾಗ್ರಣಿ ಕದಂಬ ಮಯೂರವರ್ಮನ ವಂಶದಲ್ಲಿ ಹುಟ್ಟಿದವರೂ ಬನವಸೆಯ ಮಧುಕೇಶ್ವರ ದೇವರ ವರಪ್ರಸಾದಕ್ಕೆ ಪಾತ್ರರೂ ಆದ ನಿಮಗೆ ಇದೇನು ಅಸಾಧ್ಯವಲ್ಲ. ತೈಲಮರಸರೇ, ಈ ಕಾರ್ಯವನ್ನು ಬಹು ಸಾಹಸ ದಿಂದ ನೀವು ನೆರವೇರಿಸುವಿರಿ ಎಂಬ ಬಗೆಗೆ ಸಂದೇಹ ಬೇಡ. ಆದರೆ ಈ ಕಾರ್ಯದ ಸರ್ವಭಾರವನ್ನು ನಿಮ್ಮ ಚಿಕ್ಕರಾಜ್ಯದ ಸೇನಾಬಲದ ಮೇಲೆ ಹೊರಿಸಲು ನನಗೆ ಇಷ್ಟವಿಲ್ಲ. ಸಾಮ್ರಾಜ್ಯದ ಐವತ್ತು ಸಾವಿರ ಸೇನೆ ಯನ್ನು ತೆಗೆದುಕೊಂಡು ಇಟ್ಟಿಗೆಯ ಮಹಾದೇವ ದಂಡನಾಯಕರು ನಿಮಗೆ ನೆರವಾಗುವರು.''

ವಿಕ್ರಮಾದಿತ್ಯನು ಪ್ರೋತ್ಸಾಹನದಿಂದ ಭಾಷಣ ಮಾಡುತ್ತಾ ತೈಲ ಮರಸ, ಮಹಾದೇವ ದಂಡನಾಯಕರ ಕಡೆಗೆ ದೃಷ್ಟಿಯನ್ನು ಹೊರಳಿಸಿದನು.

"ಆಗಬಹುದು ; ಮಹಾಪ್ರಭುಗಳ ಸಂಕಲ್ಪ."

ಎಂದು ತೈಲಮರಸನೂ ಇಟ್ಟಿಗೆಯ ಮಹಾದೇವ ದಂಡನಾಯಕನೂ ಕ್ರಮವಾಗಿ ಎದ್ದು ನಿಂತು ತಂತಮ್ಮ ಒಪ್ಪಿಗೆಯನ್ನು ನೀಡಿದರು.

"ಕಾದಂಬ ಜಯಕೇಸಿಯ ಸಂಪರ್ಕದ ಮೂಲಕ ಈ ರೋಗದ ಸೋಂಕು ಆಚೆಗೆ ಘಟ್ಟದ ಕೆಳಗಿನ ಕೊಂಕಣ ನಾಡಿಗೆ ಅಂಟಿಕೊಳ್ಳದಂತೆ ಅನಂತದೇವರಸರು ಎಚ್ಚರ ಪಡುವರಾಗಿ ಎಣಿಸಿದ್ದೇನೆ."

ಕುಂತಲೇಶ್ವರನು ಕೊಂಕಣದ ಮಹಾ ಸಾಮಂತಾಧಿಪತಿ ಅನಂತ ದೇವನ ಕಡೆಗೆ ತನ್ನ ಕಟಾಕ್ಷವನ್ನು ಬೀರಿದನು.

"ಖಂಡಿತವಾಗಿ ನನ್ನ ರಾಜ್ಯದ ತೆಂಕಲಲ್ಲಿ ನೆಲಸಿದ ಕಾದಂಬ ಜಯ ಕೇಸಿ ಬಹುದಿನಗಳಿಂದ ನನ್ನ ಕೊಂಕಣ ಪ್ರಾಂತದ ಮೇಲೆ ಕಣ್ಣಿಟ್ಟಿರುವನು. ಹೊತ್ತು ಸಾಧಿಸಿ ಆಗಾಗ ನುಗ್ಗಿ ಬರುತ್ತ ಅಷ್ಟಷ್ಟು ಪ್ರದೇಶಗಳನ್ನು ಆಕ್ರಮಿಸು ತ್ತಿರುವನು. ಆತನ ಈ ಆಕ್ರಮಣವನ್ನು ನಿಲ್ಲಿಸಲು ನಾನು ಆಯಾಸಪಡು ತ್ತಲಿದ್ದೇನೆ. ಬಿಟ್ಟಿದೇವನ ಈ ತಂತ್ರಗಾರಿಕೆಯನ್ನು ಕಂಡಾಗಿನಿಂದ ಹೆಚ್ಚಿನ ದಕ್ಷತೆಯಿಂದ ನನ್ನ ತೆಂಕಣ ಗಡಿಯಲ್ಲಿ ದಂಡನ್ನು ಸಿದ್ಧಗೊಳಿಸುತ್ತಿದ್ದೇವೆ. ಆದರೆ ಘಟ್ಟದ ಮೇಲೆ ನನಗೆ ಇನ್ನೊಬ್ಬ ಹಗೆ ಗಂಟು ಬಿದ್ದಿರುವನು. ನನ್ನ ಜ್ಞಾತಿಬಾಂಧವನಾದ ಕರಾಡದ ಶಿಲಾಹಾರ ಭೋಜನು ಆ ದ್ರೋಹಿಗಳ ಗುಂಪಿಗೆ ಸೇರಿರುವನು ನನಗೆ ಸ್ವಲ್ಪ ವಯಸ್ಸೂ ಆಗಿದೆ ಹೀಗೆ ಎರಡು ಪಕ್ಕೆಯಲ್ಲಿ ವೈರಿಗಳು ಹುಟ್ಟಿದುದರಿಂದ ನನ್ನ ಅವಸ್ಥೆ ಕಷ್ಟಕರವಾಗಿದೆ."

ಅನಂತದೇವರು ಉಸಿರಿಕ್ಕುತ್ತ ಉಸಿರಿದನು.

"ಚಿಂತಿಸಬೇಡಿ ಅನಂತದೇವರೇ. ನೀವು ಏಕಾಕಿ, ಬಲಹೀನರು, ಶತ್ರುಗಳು ಅನೇಕರು, ಬಲಿಷ್ಠರು ; ಎಂದು ಭಯಪಡಬೇಡಿ. ನಿಮ್ಮ ಸಹಾ ಯಕ್ಕೆ ನನ್ನ ಮಹಾಮಂಡಲೇಶ್ವರರು ಬರುವರು. ಏಕೆ ಕಾರ್ತ—"

ಎಂದು ಸುಗಂಧವರ್ತಿ ಕಾರ್ತವೀರ್ಯದೇವನ ಕಡೆಗೆ ನೋಡುತ್ತ ವಿಕ್ರಮಾದಿತ್ಯನು ಆಡುವ ಮಾತು ಮುಗಿಯುವುದಕ್ಕೆ ಮೊದಲೇ ರಟ್ಟಕುಲದ ಆ ಮಹಾಮಂಡಲೇಶ್ವರನು ಎದ್ದು ನಿಂತು ಪ್ರಾರ್ಥಿಸಿದನು :

"ನನ್ನ ರಾಜ್ಯದ ಪ್ರಬಲವಾದ ಪಡೆಯನ್ನು ಅನಂತದೇವರಸರ ಸಹಾ ಯಕ್ಕೆ ಕ್ಷಿಪ್ರದಲ್ಲಿಯೇ ಕಳಿಸಿಬಿಡುವೆನು."

"ಇದೀಗ ನನಗೆ ಧೈರ್ಯ ಬಂದಿತು, ಚಕ್ರೇಶ್ವರರೇ. ಇನ್ನು ಮೇಲೆ ನಾನು ನನ್ನ ನೆರೆಯ ಆ ದ್ರೋಹಿಗಳಿಬ್ಬರ ಕುತಂತ್ರಗಳನ್ನು ಹರಿದುಹಾಕಲು ಹೆಣಗುವೆ"

ಅನಂತದೇವನು ಧೈರ್ಯವನ್ನು ತಂದುಕೊಂಡು ಅರಿಕೆ ಮಾಡಿದನು.

"ನೊಳಂಬವಾಡಿಯ ಪಾಂಡ್ಯನನ್ನು ಹಿಡಿದಿಕ್ಕುವ ಹೊಣೆ ಯಾರದು ?" ವಿಕ್ರಮಾದಿತ್ಯನು ನೇರವಾಗಿ ಪ್ರಶ್ನೆಯನ್ನು ಬೀಸಿದನು.

"ಆತನ ನಾಡಿನ ನೆರೆಯಲ್ಲಿ ಇದ್ದುದರಿಂದ ಅದರ ಭಾರವು ನನ್ನ ಮೇಲಿ ಇದೆ, ಮಹಾಸ್ವಾಮೀ !" ಬೆಳುವಲ ನಾಡಿನ ದಂಡಾಧಿಪತಿ ಬಲವರ್ಮನು ನಮ್ರವಾಗಿ ಬಿನ್ನವಿಸಿಕೊಂಡನು.

ಸಂದರ್ಭವು ಹೇಗೋ ಎಂದು ನನ್ನ ಪ್ರದೇಶದಲ್ಲಿ ಕೆಚ್ಚಿದೆಯ ಕೂರಾಳುಗಳ ದಂಡನ್ನು ಕೂಡಿಸಿರುವೆ, ಇದನ್ನು ಎತ್ತಿಕೊಂಡು ನಾನು ಬಲವರ್ಮನಾಯಕರಿಗೆ ಬೆಂಬಲವಾಗುವೆ." ಪುಲಿಗೆರೆಯ ಕನ್ನಡ ಸಂಧಿವಿಗ್ರಹಿ ಪೆರ್ಗಡೆ ಭಾಸ್ಕರದೇವನು ಅನುಮೋದಿಸಿ ಬೇಡಿಕೊಂಡನು.

"ಸರಿ, ಈ ಎರಡು ಗುಂಡುಗಳು ಉರುಳಿದ ಬಳಿಕ ಪಾಂಡ್ಯನ ದಂಡು ಪುಡಿ ಪುಡಿಯಾಗುವಲ್ಲಿ ಅನುಮಾನವೇಕೆ ? ಇದು ನಿರೋಧದ ವಿಧಾನವಾಯಿತು. ಇನ್ನು ಪ್ರತೀಕಾರ ಎಂದರೆ ಹಗೆಯ ಮೇಲೆ ಏರಾಟ. ಇದಕ್ಕಾಗಿ ಒಬ್ಬ ಮಹಾ ದಂಡನಾಯಕನನ್ನು ನೇಮಿಸಬೇಕಾಗಿದೆ. ಆತನ ಕೈಕೆಳಗೆ ಸಾಮ್ರಾಜ್ಯದ ನುರಿತ ಅರವತ್ತೈದು ಸಾವಿರ ಸೈನಿಕರನ್ನು ಕೊಡುವೆ. ಆತನು ಈ ದಂಡನ್ನೂ ಇದರ ಜೊತೆಗೆ ಸ್ವಂತದ ದಂಡನ್ನೂ ತೆಗೆದುಕೊಂಡು ಅತಿ ರಭಸದಿಂದ ಆಕ್ರಮಣ ಯಾತ್ರೆಯನ್ನು ಆರಂಭಿಸತಕ್ಕದ್ದು. ಅಶಾಂತಿಗೆ ಒಳಪಟ್ಟ ಭಾಗಗಳಿಗೆ ಸಂಚರಿಸಿ ದೊಂಬೆಗಾರರನ್ನು ದಂಡಿಸಿ ಸಾಮ್ರಾಜ್ಯದ ಶಾಸನವನ್ನು ಸ್ಥಿರಗೊಳಿಸತಕ್ಕದ್ದು. ಈ ಮಹಾ ದಂಡನಾಯಕನ ಕೆಲಸವನ್ನು ನಿರ್ವಹಿಸಲು ಸಮರ್ಥರಾರು ?"

ವಿಕ್ರಮಾದಿತ್ಯನು ಮಹಾ ಪ್ರಶ್ನೆಯನ್ನು ನಿಲ್ಲಿಸಿದನು. ಅದನ್ನು ಕೇಳಿ ಎಲ್ಲರು ಸಮಸ್ಯೆಗೆ ಒಳಗಾದರು.

ಕೆಲನಿಮಿಷಗಳವರೆಗೆ ಯಾರೂ ಮಾತನಾಡಲಿಲ್ಲ. ಬಳಿಕ ಬಲವರ್ಮನು ಮೆಲ್ಲನೆ ನುಡಿಗೆ ಅಡಿಯಿಟ್ಟನು.

"ಅನ್ಯಥಾಗ್ರಹಿಕೆ ಆಗದಂತಿದ್ದರೆ ಈ ವಿಷಯದಲ್ಲಿ ನನ್ನದೊಂದು ಸೂಚನೆ ಇದೆ."

"ಅಗತ್ಯವಾಗಿ ಹೇಳಬಹುದು, ಬಲವರ್ಮರೆ; ವಿಶ್ವಾಸವೇ ಮುಖ್ಯವಾದುದು. ನಾವು ವಿಶ್ವಾಸದಿಂದ ಸೂಚಿಸುವ ವಿಚಾರವನ್ನು ಅನುಕೂಲವಾಗಿ ಆಲೋಚಿಸಲು ಅಭ್ಯಂತರವೇನು ? ಹೇಳಿರಿ." ವಿಕ್ರಮಾದಿತ್ಯನು ಆಶ್ವಾಸನವಿತ್ತನು.

"ಈ ಕಾರ್ಯವನ್ನು ನೆರವೇರಿಸಲು ನನ್ನ ನಾಡಿನ ನೆರೆಯ ಮಹಾಮಂಡಲೇಶ್ವರರೊಬ್ಬರು ಯೋಗ್ಯರು ಎಂದು ನನ್ನ ತಿಳಿವಳಿಕೆ. ಅವರು ಸಾಹಸಿಗಳಲ್ಲದೆ ತುಂಬ ಉತ್ಸಾಹಿಗಳು. ಅನೇಕ ಸಂಗ್ರಾಮಗಳನ್ನು ಜಯಿಸಿದವರು. ನಡುವಯಸ್ಸಿನವರಾಗಿದ್ದರೂ ಕಾಳೆಗವೆಂದರೆ ಮದುವಣಿಗನು ಮದುವೆ ಮಂಟಪಕ್ಕೆ ಹೋಗುವಷ್ಟು ಉಲ್ಲಾಸ ಅವರಿಗೆ. ಅವರದು ಒಂಟಿಯ ಹಿಡಿತ. ಹಿಡಿದುದ್ದನ್ನು ಬಿಡುವವರೇ ಅಲ್ಲ. ಧೀರತೆಯೊಡನೆ ಚಪಲತೆಯೂ ಅವರ ವೈಗುಣ, ಸಾಮ್ರಾಜ್ಯ ನಿಷ್ಠೆಯಲ್ಲಿ ನಿಸ್ಸೀಮರು. ಪ್ರಭುಗಳಿಗೆ ಪ್ರೀತಿ ಪಾತ್ರರಾಗಿ 'ತ್ರಿಭುವನಮಲ್ಲಕೇಸರಿ' ಎಂಬ ಅತ್ಯಂತ ಗೌರವದ ಬಿರುದನ್ನು ಪಡೆದಿರುವರು. ನನ್ನ ನಾಡಿನ ನೆರೆಯಲ್ಲಿ ಇದ್ದುದರಿಂದ ಅವರ ಶಕ್ತಿ ಮತ್ತು ಕಾರ್ಯಕಲಾಪಗಳು ನನಗೆ ಸುಪರಿಚಿತವಾದುವು. ಅವರು ಈ ಸಂಗ್ರಾಮಕ್ಕಾಗಿ ಬಹುವಾಗಿ ಶ್ರಮಿಸಿ ಬಲವಾದ ದಂಡನ್ನು ಕೂಡಿಸಿರುವರು. ಅವರ ಸಮರ ಚೇಷ್ಟೆಯಲ್ಲಿ ಮುಂಗಾರ ಬಿರುಗಾಳಿಯ ಕ್ರೂರ ರಭಸವೂ ನಡುಮಳೆಗಾಲದ ಜಡಿ ಮಳೆಯ ಆಳವಾದ ನಿರ್ಧಾರವೂ ವೈಗೂಡಿಕೊಂಡಿರುತ್ತವೆ. ಆದುದರಿಂದ ಈ ಕಾರ್ಯಕ್ಕೆ ಅವರು ತುಂಬ ಯೋಗ್ಯರು ಎಂದು ನಾನು ಸ್ವಾನುಭವದಿಂದ ವಿದಿತಪಡಿಸಲು ಬಯಸುವೆ."

"ಬಲವರ್ಮದೇವರ ಈ ಅಭಿಪ್ರಾಯವನ್ನು ಅನುಮೋದಿಸುತ್ತ ಎರಂಬರಗೆಯ ಮಹಾ ಮಂಡಲೇಶ್ವರ ಆಚರಸರನ್ನು ಈ ಕೆಲಸಕ್ಕೆ ಆರಿಸಬೇಕೆಂದು ನಾನು ಆಸ್ಥೆಯಿಂದ ಕೋರುವೆ." ಭಾಸ್ಕರ ದೇವನು ಉತ್ಸಾಹಪೂರ್ವಕ ಪುಷ್ಟೀಕರಿಸಿದನು.

"ಆಚರಸರ ಕಾರ್ಯಪ್ರತಾಪದ ಕೀರ್ತಿ ಘಟ್ಟದ ಮೇಲಿನ ಹತ್ತಿರದ ಈ ಬಯಲು ನಾಡುಗಳಲ್ಲಿ ಮಾತ್ರವೇ ಅಲ್ಲ, ದೂರದ ಸಹ್ಯಗಿರಿಯನ್ನೂ ಉಲ್ಲಂಘನ ಮಾಡಿ ಘಟ್ಟವನ್ನು ಇಳಿದು ಸಪ್ತಕೊಂಕಣದ ನಾಡುಗಳಲ್ಲಿಯೂ ಹಬ್ಬಿದೆ. ಅವರ ಪರಾಕ್ರಮ ಮತ್ತು ಕರ್ತವ್ಯನಿಷ್ಠೆಯ ವಿಷಯವಾಗಿ ಯಾರಲ್ಲಿಯಾದರೂ ಭಿನ್ನಾಭಿಪ್ರಾಯವಿರಬಹುದು ಎಂದು ನನಗೆ ತೋರುವುದಿಲ್ಲ." ಅನಂತದೇವನು ಸಮರ್ಥಿಸಿದನು.

"ನಮ್ಮ ಬನವಸೆ ನಾಡಿನಲ್ಲಿ ಆಚರಸರ ಹೆಸರನ್ನರಿಯದ ದಂಡಾಳು ಸಿಕ್ಕಲಾರನು. ಅನಂತದೇವರ ಮಾತು ಯಥಾರ್ಥವಾದುದು" ತೈಲಮರಸನು ಬೆಂಬಲವಿತ್ತನು.

"ಇಷ್ಟು ಜನ ನೀವೆಲ್ಲರು ಸೇರಿಕೊಂಡು ಒಳಸಂಚು ಮಾಡಿ ಆಚರಸನಿಗೆ ಮಹಾದಂಡನಾಯಕತ್ವದ ಪಟ್ಟಕಟ್ಟಬೇಕೆಂದು ಸಿದ್ಧರಾಗಿರುವಾಗ ಇನ್ನುಳಿದ ನಾನೊಬ್ಬನು 'ತಥಾಸ್ತು' ಎನ್ನದೆ ಇರಲು ಆಗುತ್ತದೆಯೇ ? ಸರಿ ಹಾಗೇ ಆಗಲಿ. ಎರಂಬರಗೆಯ ಮಹಾ ಮಂಡಲೇಶ್ವರ ಆಚರಸರು ಸಾಮ್ರಾಜ್ಯದ ಶತ್ರುಗಳಾದ ಚೋಳರನ್ನು ಸದೆಬಡಿದು ಸಾಮ್ರಾಜ್ಯದ ಸೇವೆಯನ್ನು ಮಾಡಿದುದಕ್ಕೆ ನಾವೆಲ್ಲರೂ ಆತನನ್ನು ಅಭಿನಂದಿಸಿದ್ದೇವೆ."

"ಬಿಟ್ಟಿದೇವನು ವಿಜಯಗಳಿಂದ ಉನ್ಮತ್ತನಾದ ತನ್ನ ಶಕ್ತಿ ಸಾಹಸಗಳನ್ನು ಸಾಮ್ರಾಜ್ಯದ ವಿರುದ್ಧವಾಗಿ ಪ್ರಯೋಗಿಸಲು ಹವಣಿಸಿದುದು ಶುದ್ಧ ಆತ್ಮವಂಚನೆ; ರಾಷ್ಟ್ರದ್ರೋಹ. ಜನಾಂಗದಲ್ಲಿ ಇದೀಗ ಬೀಸುತ್ತಿರುವ ಅಶಾಂತಿಯ ಘೋರ ಬಿರುಗಾಳಿಯ ಮೂಲಕಾರಣವೇ ಆತನು. ಕಣ್ಣೆಗಾಲ ಕಾಳಗದಲ್ಲಿ ಚಕ್ರೇಶ್ವರರ ಮೇಲೆ ಕೈಯೆತ್ತಿದಂದಿನಿಂದ ಸಾಮ್ರಾಜ್ಯದ ವಿರುದ್ಧವಾಗಿ ವಿದ್ರೋಹದ ಬೇಗೆಯನ್ನು ಹಬ್ಬಿಸುತ್ತಿರುವನು. ಈ ಪಾಪದ ಪ್ರಾಯಶ್ಚಿತ್ತವನ್ನು ನಾವು ಆತನಿಗೆ ಚೆನ್ನಾಗಿ ಉಣಿಸಲೇಬೇಕು." ಆಚರಸನು ಎದ್ದು ಉಪನ್ಯಾಸಮಾಡುತ್ತ ತನ್ನೊಳಗೆ ಹುದುಗಿದ್ದ ಯೋಚನೆಯನ್ನು ಹೊರಗೆಡಹಿದನು.

ಆ ಕೆಲಸವನ್ನು ಮಾಡಲು ನೀವು ಸಮರ್ಥರು ಎಂದು ನಮ್ಮೆಲ್ಲರ ನಂಬುಗೆ ಇದೆ. ಬಿಟ್ಟಿದೇವನ ವಿರೋಧ ವೃತ್ತಿಯ ನಿದರ್ಶನವು ಆತನು ತನಗಾಗಿ ಎತ್ತಿಕೊಂಡಿದ್ದ ಒಂದು ಬಿರುದಿನಲ್ಲಿಯೂ ಸಿಕ್ಕುವಂತಿದೆ. ಪ್ರಭು

ಗಳೊಬ್ಬರಿಗೆ ಸಲ್ಲಬೇಕಾಗಿದ್ದ 'ತ್ರಿಭುವನಮಲ್ಲ' ಎಂಬ ಘನವಾದ ಬಿರುದನ್ನು ತಾನು ಕಿತ್ತುಕೊಂಡು ಮೆರೆಯುತ್ತಿರುವನು ಆ ಚೋರ.'' ತೈಲಮರಸನು ಹೊಸತನ್ನು ಹುಡುಕಿ ತಂದವನ ಆವೇಶದಿಂದ ಹೇಳಿದನು.

''ಬರಿಯ ಹೆಸರಿನಲ್ಲಿ ಏನಿದೆ ? 'ತ್ರಿಭುವನಮಲ್ಲ' ಎಂದು ಹೇಳಿಕೊಂಡ ಮಾತ್ರಕ್ಕೆ ಪ್ರಭುಗಳಿಗೆ ಸಮನಾಗಬಲ್ಲನೇ ಆ ಧೃಷ್ಟ ? 'ತ್ರಿಭುವನಮಲ್ಲ' ಎಂದು ಮಾತ್ರವೇಕೆ, ತ್ರಯೋದಶಭುವನಮಲ್ಲ ಎಂದು ತನ್ನನ್ನು ತಾನು ಹೊಗಳಿಸಿಕೊಳ್ಳಲಿ ಆ ಧೂರ್ತ. ಆ ತ್ರಯೋದಶಮಲ್ಲನ ಈ ಜೊಳ್ಳು ಮೆರವಣಿಗೆಯನ್ನು ಮಣ್ಣುಗೂಡಿಸಲಿಕ್ಕೆ ಶ್ರೀ ತ್ರಿಭುವನಮಲ್ಲದೇವರ ಮಹಾದಂಡನಾಯಕ 'ತ್ರಿಭುವನಮಲ್ಲಕೇಸರಿ' ಪುಟನೆಗೆದು ನುಗ್ಗಿ ಬರುತ ಲಿದ್ದಾನೆ. ಎಂಬುದು ಸ್ವಲ್ಪ ಹೊತ್ತಿನಲ್ಲಿಯೇ ಆ ಕೇಡಿಗೆ ಮನದಟ್ಟಾಗು ವುದು.'' ಅನಂತದೇವನು ಭಾಷ್ಯಕಾರನ ಅಟ್ಟಹಾಸದಿಂದ ವಿವರಣೆಮಾಡಿ ವಿರಮಿಸಿದನು.

''ಮಹಾದಂಡನಾಯಕರೇ, ನಿಮ್ಮ ದಂಡ ಯೋಜನೆಯನ್ನು ಬೇಗನೆ ಸಿದ್ಧಪಡಿಸಿರಿ; ಅಂದರೆ ಇಂದು ರಾತ್ರಿಯಲ್ಲಿಯೇ ಅದನ್ನು ಚರ್ಚಿಸುವ. ನಾಡದ್ದು ಸೂರ್ಯೋದಯಕ್ಕೆ ಮುಂಚಿತವಾಗಿ ನೀವು ನಿಮ್ಮ ಸಕಲ ಸನ್ನಾಹ ದೊಂದಿಗೆ ಈ ಊರಿಂದ ಹೊರಟು ಮಾರ್ಗಸ್ಥರಾಗಿರಬೇಕು ಎಂಬುದನ್ನು ಲಕ್ಷಿಸತಕ್ಕದ್ದು. ಆಚರಸರೇ ಸಕಲ ಸಲಕರಣೆಗಳನ್ನು ಅಣಿಮಾಡಿಕೊಳ್ಳುವ ಉದ್ಯೋಗಕ್ಕೆ ನೀವು ಈಗಿನಿಂದಲೇ ತೊಡಗುವುದು ಒಳ್ಳೆಯದು, ಅಲ್ಲವೆ ?'' ವಿಕ್ರಮಾದಿತ್ಯನು ಆಚರಸನನ್ನು ಕುರಿತು ಆಲೋಚಿಸಿದನು.

''ಅಹುದು ಮಹಾಪ್ರಭು. ಸಮಯ ಸ್ವಲ್ಪ ; ಕಾರ್ಯಗಳು ಬಹಳ. ಇನ್ನು ಪ್ರಭುಗಳ ಪಾದಾನುಗ್ರಹದಿಂದ ಕೈಕೊಂಡ ಕಾರ್ಯವನ್ನು ನೆರವೇರಿಸಿ ಸುರಕ್ಷಿತವಾಗಿ ಮರಳಿ ಬಂದ ಬಳಿಕ ತಾನೇ ನನಗೆ ವಿಶ್ರಾಂತಿ. ಕುಕ್ಕನೂರ ಶ್ರೀ ಮಹಾಮಾಯೆಯ ವರಪ್ರಸಾದದಿಂದ ಎಲ್ಲವೂ ಅನುಕೂಲವಾಗುವುದಾಗಿ ನಂಬಿದ್ದೇನೆ. ದೇವಿಯ ಕೃಪೆ, ಪ್ರಭುಗಳ ಆಶೀರ್ವಾದ; ಈ ಎರಡು ಕವಚ ಗಳು ನನ್ನೀ ಮೈಗೆ ಮೈಜೋಡಾಗಿದ್ದರೆ ಸಾಕು. ಬೇರಾವ ಬಲವೂ ನನಗೆ ಬೇಡ.'' ಆಚರಸನು ನಿಷ್ಠೆಯಿಂದ ಉತ್ತರವಿತ್ತನು.

"ಇಂದು ದೀಪಾವಳಿ ಹಬ್ಬದ ನಿಮಿತ್ತ ನಗರೇಶ್ವರ ದೇವರಿಗೆ ಉತ್ಸವ ವಲ್ಲವೇ ? ಅಕೋ ಕೇಳಿ ಮಂಗಳವಾದ್ಯಗಳ ಘೋಷವು ಕೇಳುತಲಿದೆ." ವಿಕ್ರಮೂತ್ಯನು ಎದ್ದು ನಿಂತು ಬೆರಳು ಮಾಡುತ್ತ ಸೂಚಿಸಿದನು.

ವಿಕ್ರಮಾದಿತ್ಯನ ಈ ಸೂಚನೆಯನ್ನು ತಿಳಿದು ಸಭಿಕರೆಲ್ಲರು ಎದ್ದು ಹೊರ ಹೊರಟರು. ಮಂತ್ರಾಲೋಚನಾ ಸಭೆ ಮುಕ್ತಾಯವಾಯಿತು.

---

## ಕಿರಣ ಏಳು

# ಸಮರ ಕೋಲಾಹಲ

"ಡುಂ-ಡುಂ-ಡುಂ, ಢುಂ-ಢುಂ ಢುಂ-ಢುಂ ಢುಮ್ !" ದುಂದುಭಿ

"ಬೊಂ ಬೊಂ ಬೊಂ, ಭೊಂವ್-ಭೊಂವ್ ಭೊಂವ್ ಭೊಂವ್ ಭೊಂವ್" ಕಹಳೆ ಕಿರುಚಿಕೊಂಡಿತು.

ಬೆಳಗಾಗಲಿಕ್ಕೆ ಸುಮಾರು ಒಂದು ಜಾವ ಇನ್ನೂ ಇರಬಹುದು. ಕಲ್ಯಾಣ ರಾಜಧಾನಿಯ ಹೊರಕೋಟೆಯ ಪಡುವಣ ಹೆಬ್ಬಾಗಿಲ ಮುಂದು ಗಡೆ ಸಮರಭೇರಿ ಮೊಳಗಿತು ; ರಣಕಹಳೆ ಕೂಗಿತು. ಈ ಸೂಚನೆಯನ್ನು ಎತ್ತಿಕೊಂಡು ಆ ಬಾಗಿಲ ಇಕ್ಕೆಲದ ಕೊತ್ತಳಗಳ ಮೇಲಿನ ದುಂದುಭಿ ಕಹಳೆ ಗಳೂ ಮಿಕ್ಕ ಏಳು ದಿಕ್ಕಿನ ಕೊತ್ತಳಗಳ ಮೇಲಿನ ದುಂದುಭಿ-ಕಹಳೆಗಳೂ ಘನಘೋರ ಧ್ವನಿಯನ್ನು ತೂರತೊಡಗಿದವು. ಈ ಧ್ವನಿಯನ್ನು ಕೇಳಿ ಮುಂಜಾಗ್ರತಿಯಿಂದ ಮೊದಲೇ ಎಚ್ಚತ್ತು ಸಜ್ಜುಗೊಳ್ಳುತ್ತಿದ್ದ ಸೈನಿಕರು ಬಡಿದೆಬ್ಬಿಸಿದಂತೆ ತಮ್ಮ ತಮ್ಮ ಪಾಳ್ಯಗಳಿಂದ ಲಗುಬಗೆಯಾಗಿ ಹೊರಟು ಓಡೋಡಿ ಬಂದು ಪಡುವಣ ಹೆಬ್ಬಾಗಿಲ ಮುಂದುಗಡೆ ನೆರೆಯ ತೊಡಗಿದರು. ಮನೆಯಲ್ಲಿ ಉಳಿದುಕೊಂಡಿದ್ದ ಕೆಲರು ತಮ್ಮ ಪ್ರಿಯಜನರಿಂದ ಬೀಳ್ಕೊಂಡು ಕೇರಿ ಕೇರಿಗಳಿಂದ ಧಾವಿಸುತ್ತ ತಮ್ಮ ತಮ್ಮ ಪಡೆಗಳಿಗೆ ಸೇರಿಕೊಂಡು ದಂಡಿ ನಲ್ಲಿ ಕೂಡಿದರು. ಅಂದು ಅಮಾವಾಸ್ಯೆಯ ಕತ್ತಲೆ ಲೋಕವನ್ನು ಆವರಿಸಿ ದ್ದರೂ ದೀಪಾಳಿಯ ನಿಮಿತ್ತ ಕೋಟೆ ಕೊತ್ತಳಗಳ ಮೇಲೆ ಬೆಳಗಿಸಿದ ಅಸಂಖ್ಯ ದೀಪ ಮಾಲೆಯಿಂದಲೂ ದಂಡಿನ ನಡೆದಾಟದ ಸೌಕರ್ಯಕ್ಕಾಗಿ

ಉರಿಸಲಾಗಿದ್ದ ವಿಶಿಷ್ಟ ಉರಿ-ದೀಪಗಳಿಂದಲೂ ಆ ಪ್ರದೇಶವು ಬೆಟ್ಟ ಬೆಳಕಾಗಿ ಪ್ರಕಾಶಿಸುತ್ತಲಿತ್ತು.

ಅಂದು ರಾತ್ರಿಯೆಲ್ಲ ವಿಕ್ರಮಾದಿತ್ಯನಿಗೆ ಜಾಗರಣೆ. ದುಂದುಭಿಯ ಶಬ್ದದಿಂದ ನಿದ್ದೆಗೆಟ್ಟು ಎಚ್ಚತ್ತ ಚಂದ್ರಲೇಖೆ ಕಣ್ಣೊರಿಸಿಕೊಳ್ಳುತ್ತ ಕೇಳಿದಳು: "ಅಪ್ಪಯ್ಯ, ಇನ್ನೂ ಇದುವರಿಗೆ ನಿದ್ದೆ ಬರಲೇ ಇಲ್ಲವೇ? ಎದ್ದೇ ಕುಳಿತಿದ್ದೀರಲ್ಲಾ! ಇದೀಗ ಎಷ್ಟು ರಾತ್ರಿಯೇ?"

"ಪ್ರಿಯೆ, ಇದೀಗ ಮಲಗುವ ಸಮಯವಲ್ಲ; ಏಳುವ ಹೊತ್ತು. ಇಕೋ! ಇದು ಕೇಳಿಸುತ್ತಿರುವುದು ರಣಭೇರಿಗಳ ಘೋಷ. ನಮ್ಮ ಸೈನಿಕರು ದಂಡಯಾತ್ರೆಗೆ ಹೊರಡಲಿದ್ದಾರೆ. ಇದೀಗ ಹೊಸ ವರ್ಷದ ಶುಭ ಮುಹೂರ್ತ. ಬಲಿ ಪ್ರತಿಪದೆಯ ಪ್ರಾರಂಭ."

"ನಾಥ, ಇಂದಿನ ಶುಭದಿನ ಶ್ರೀ ವಿಷ್ಣು ಬಲಿದೈತ್ಯವನ್ನು ಪಾತಾಳಕ್ಕೆ ಅಟ್ಟಿದಂತೆ ನಮ್ಮ ಸೈನಿಕರು ದ್ರೋಹಿಗಳನ್ನು ನೆಲಕ್ಕೆ ತುಳಿದು ಅವರು ತಿರುಗಿ ತಲೆಯೆತ್ತದಂತೆ ಮಾಡಲಿ."

"ಪ್ರಿಯೆ, ಸೇನಾ ಸಂಮುಖಕ್ಕೆ ಹೋಗಿ ಆ ಮಹಾದಂಡಾಧಿಪತಿಯನ್ನೂ ನನ್ನ ದಂಡಾಳುಗಳನ್ನೂ ನಾನು ಬೀಳ್ಕೊಡಬೇಕು."

"ನಾಥ, ನಾನಾದರೂ ಬರುವೆ ತಮ್ಮ ಸಂಗಡ."

"ನಡೆ ಹಾಗಾದರೆ."

* * * *

ತನ್ನ ಸ್ವಂತದ ಹದಿನೈದು, ಸಾಮ್ರಾಜ್ಯದ ಅರುವತ್ತೈದು, ಹೀಗೆ ಎಂಬತ್ತು ಸಾವಿರ ಬಲ್ಲಾಳುಗಳ ಬಲದೊಂದಿಗೆ ಕಲ್ಯಾಣ ರಾಜಧಾನಿಯ ಪಡುವಣ ಕೋಟೆ ಬಾಗಿಲಿಂದ ಹೊರ ಹೊರಟ ಮಹಾದಂಡಾಧಿಪತಿ ಆಚರಸನು ತೆಂಕಣ ಮೊಗವಾಗಿ ಮಾರ್ಗಸ್ಥನಾದನು. ಆತನ ದಂಡಾಳುಗಳು ಬಿಲ್ಲು, ಅಂಬು, ಕತ್ತಿ, ಈಟಿ, ಭಲ್ಲೆ, ಪರಶವ, ಕೊಂತ, ಹಲಗೆ, ಕವಚ, ಮೊದಲಾದ ಏರಾಟದ ಮತ್ತು ಸಂರಕ್ಷಕ ಸಾಧನಗಳಿಂದ ಸುಸಜ್ಜಿತರಾಗಿದ್ದರು. ದಂಡಿನ ಮುಂಬದಿಯಲ್ಲಿ ಭದ್ರವಾದ ಕುದುರೆಯೇರಿದ ಇಪ್ಪತ್ತು ಸಾವಿರ ರಾವತರ ಪಡೆ ಮುನ್ನುಗ್ಗುತ್ತಿದ್ದಿತು. ಅದರ ಹಿಂದೆ ಅಂಬಾರಿ ಕಟ್ಟಿದ ಮುನ್ನೂರು ಆನೆಗಳು ಠೀವಿಯಿಂದ ಸಾಗಿದ್ದುವು. ಮಹಾದಂಡ

ನಾಯಕ, ದಂಡನಾಯಕ, ದಲಪತಿ, ಮೊದಲಾದ ದಂಡಾಧಿಕಾರಿಗಳು ಆ ಆನೆಗಳ ಮೇಲೆ ಆರೋಹಣ ಮಾಡಿದವರಾಗಿ ಬಲ್ಲುಲಿಯ ಕೊಂಬುಗಳ ಮೂಲಕ ಆಗಾಗ ಪಡೆಗಳಿಗೆ ಆಜ್ಞೆಗಳನ್ನು ವಿಧಿಸುತ್ತಿದ್ದರು. ಆನೆಗಳ ಹಿಂದೆ ಕಾಲಾಳುಗಳ ಹಿರಿಯ ದಂಡು ಕಾಲಿಕ್ಕುತ್ತಿದ್ದಿತು. ಅದರ ಹಿಂಬದಿಗೆ ಆಹಾರವೇ ಮೊದಲಾದ ಪದಾರ್ಥಗಳನ್ನು ಹೊತ್ತುಕೊಂಡ ಒಂಟೆ, ಎತ್ತು, ಕತ್ತೆ, ಹೇಸರಕತ್ತೆ, ಮೊದಲಾದ ವಾಹನಗಳನ್ನು ಮಾಡಿಕೊಂಡು ಹೋಗುವ ಸೇವಕರ, ಕೆಲಸಗಾರರ, ಕರ್ಮಕುಶಲರ ಸಂಕೀರ್ಣ ಜನಜಂಗುಳಿ ನಡೆದು ಬರುತ್ತಿದ್ದಿತು. ಬಹು ತ್ವರಿತ ಗತಿಯಿಂದ ಮುಂದೆ ಸಾಗುವಂತೆ ಆಚರಸನು ದಂಡಿನವರಿಗೆ ಆಜ್ಞಾಪಿಸಿದ್ದನು. ಕೆಲವೊಂದು ವೇಳೆ ರಾವುತರ ಪಡೆ ಮುಂದೆ ಹೋಗಿ ಒಂದೊಂದು ಬೀಡಿನಲ್ಲಿ ಸ್ವಲ್ಪ ಹೆಚ್ಚುಕಾಲ ತಂಗುತ್ತಿದ್ದಿತು. ಅಷ್ಟರಲ್ಲಿ ಕಾಲಾಳುಗಳು ಬಂದು ಅವರನ್ನು ಕೂಡಿಕೊಳ್ಳುತ್ತಿದ್ದರು. ಈ ಸೈನ್ಯದ ಈ ಸಂಚಲನವು ಸಾಧಾರಣವಾಗಿ ಮೂರು ನಾಲ್ಕು ಗಾವುದದಂತೆ ಮುಂದಕ್ಕೆ ಹೋಗುತ್ತಿದ್ದಿತು.

ಹೀಗೆ ದಿನವೊಂದಕ್ಕೆ ಹೊರಟ ಆಚರಸನು ಅಲಂದೆನಾಡನ್ನು ಹಿಂದುಳಿಸಿ ವಿಜಯಾಪುರ ನಾಡನ್ನು ಪ್ರವೇಶಿಸಿದನು. ಆ ಭಾಗದಲ್ಲಿ ಮಾರ್ಗಕ್ರಮಣ ಮಾಡುತ್ತಿರುವಾಗ ನೊಳಂಬವಾಡಿ ಮತ್ತು ಬೆಳ್ವಲ ನಾಡುಗಳಿಂದ ಅನೇಕ ಭೀತಿಯ ಸಮಾಚಾರಗಳು ಆತನಿಗೆ ಬರತೊಡಗಿದವು. ಬಿಟ್ಟಿದೇವನ ಮತ್ತು ಪಾಂಡ್ಯನ ದಂಡುಗಳು ನೊಳಂಬವಾಡಿಯಿಂದ ಹೊರಟು ತುಂಗಭದ್ರೆಯನ್ನು ದಾಟಿ ಬೆಳ್ವಲನಾಡಿನಲ್ಲಿ ನುಗ್ಗಿರುವುವೆಂದು ಆತನಿಗೆ ತಿಳಿಯಿತು. ಆಗ ಆತನು ತನ್ನ ಸೇನೆಗೆ ಇನ್ನಷ್ಟು ವೇಗವಾಗಿ ಸಾಗುವಂತೆ ಪ್ರೇರಿಸಿ ಬೆಳ್ವಲ ನಾಡಿನ ಹಿರಿಯರಾದ ಕೃತಪುರದತ್ತ ನೇರವಾಗಿ ನಡೆದನು.

ಅತ್ತ ನೊಳಂಬವಾಡಿಯ ಗಡಿಯನ್ನು ದಾಟಿದ ಬಿಟ್ಟಿದೇವನ ಮತ್ತು ಪಾಂಡ್ಯನ ದಂಡುಗರು ಸ್ವೇಚ್ಛೆಯಾಗಿ ಬೆಳ್ವಲನಾಡಿನಲ್ಲಿ ನುಗ್ಗಾಡಿ ನೆರೆಯೂರುಗಳನ್ನೂ ದುರ್ಗಗಳನ್ನೂ ಕೈವಶಮಾಡಿಕೊಳ್ಳುತ್ತ ಕಪ್ಪತ ಗುಡ್ಡದ ಸೆರಗು ಹಿಡಿದು ಕೃತಪುರದ ಹತ್ತಿರಕ್ಕೆ ಬರುತ್ತಿದ್ದುವು. ಕೃತಪುರದಿಂದ ಆಗ್ನೇಯಕ್ಕೆ ಸುಮಾರು ಎರಡು ಹರದಾರಿಯ ಮೇಲೆ ಅಡವಿಯಲ್ಲಿ ಬಂದು

ಬಿಟ್ಟುವು. ಆಚರಸನು ಬಹು ಜಾಗರೂಕತೆಯನ್ನು ವಹಿಸಿದುದರಿಂದ ಆತನ ಸೈನ್ಯದ ಸ್ಥಿತಿಗತಿಗಳ ಅರಿವು ಈ ದಂಡಿನವರಿಗೆ ಸರಿಯಾಗಿ ಆಗಿರಲಿಲ್ಲ. ಆತನು ಕಲ್ಯಾಣದಿಂದ ಹೊರಟು ವಿಜಯಾಪುರ ನಾಡಿನಲ್ಲಿ ಎಲ್ಲಿಯೋ ಸಂಚರಿಸುತ್ತಿರುವನು ಎಂಬ ಒಂದು ಹಾರಿಕೆಯ ಸುದ್ದಿ ಮಾತ್ರ ಇವರಿಗೆ ತಿಳಿದಿದ್ದಿತು. ಆದುದರಿಂದ ತಮಗೆ ಭಯವೆಂಬುದು ಎಲ್ಲಿ ಎಂಬ ನಂಬಿಗೆಯಿಂದ ಈ ದಂಡಿನವರು ಮೈಮರೆತು ಸುಖವಾಗಿದ್ದರು.

ಹೀಗೆ ಇವರು ವಿಶ್ರಮಿಸಿಕೊಳ್ಳುತ್ತಿರುವಾಗ ಒಂದು ದಿನ ನಸುಕಿನಲ್ಲಿ ಇದ್ದಕ್ಕಿದ್ದ ಹಾಗೆ, 'ಯಾರೋ ದಾಳಿ ಮಾಡುತ್ತಿರುವರು ; ತಮ್ಮನ್ನು ಸುತ್ತುವರಿದು ಮುತ್ತುತ್ತಿರುವರು ; ರಭಸವಾಗಿ ಏರಾಡುತ್ತಿರುವರು ; ವೈರಿಗಳು ಬಲಿಷ್ಠರೂ ಬಹುಸಂಖ್ಯರೂ ಆಗಿರುವರು' ಎಂಬ ವೃತ್ತಾಂತವು ಈ ದಂಡಿನ ಸೇನಾನಾಯಕನ ಶಿಬಿರಕ್ಕೆ ಬಂದು ಅಪ್ಪಳಿಸಿತು. ನಾಯಕನು ಚಕಿತನಾಗಿ ಎಚ್ಚತ್ತು ಪ್ರತಿಭಟನೆಯ ಆಜ್ಞೆಯನ್ನು ಸಾರಿದನು. ಮುತ್ತಿಗೆಯಲ್ಲಿ ಸಿಕ್ಕವರು ಕಡುತರವಾಗಿ ಕಾದಿದರು. ಆದರೆ ಆಚರಸನ ಚುರುಕಿನ ಇರಿತದ ಮುಂದೆ ಅವರ ಆಟ ಸಾಗಲಿಲ್ಲ. ಆತನು ಅವರನ್ನು ಹಣಿದು ಹಣಿದು ಹುಣ್ಣು ಮಾಡಿದನು. ಕಾದಿಟ್ಟ ಹೊಸ ಹುಮ್ಮಸ್ಸಿನ ಪಡೆಗಳನ್ನು ಮೇಲಿಂದ ಮೇಲೆ ತಂದು ಹಣಿತಕ್ಕೆ ಅಣಿಮಾಡುತ್ತಿದ್ದನು.

ನಸುಕಿನಲ್ಲಿ ಆರಂಭಿಸಿದ ಈ ಇರಿದಾಟ ತೆರಪಿಲ್ಲದೆ ಮೂರನೆಯ ಜಾವದವರೆಗೆ ಮುಂದುವರಿಯಿತು. ಮುತ್ತಿಗೆಗೆ ಒಳಗಾದವರಿಗೆ ಸ್ವಲ್ಪ ಅನುಕೂಲವೂ ಸಿಕ್ಕಿದಂತಾಗಿ ಅವರು ಸೋಲ ತೊಡಗಿದರು. ಈ ನಡುವೆ ಮಧ್ಯಾಹ್ನದ ಹೊತ್ತಿಗೆ ಬೆಳ್ವಲ ಮತ್ತು ಪುರಿಗೆರೆನಾಡಿನ ದಂಡನಾಯಕರು ಕಳುಹಿದ ಸಹಾಯ ದಳಗಳು ಬಂದು ಮುತ್ತಿಗೆಗಾರರೊಡನೆ ಕೂಡಿಕೊಂಡವು. ಇದರಿಂದ ಆಚರಸನ ಸೈನಿಕರ ಆ ವೇಶವು ಇಮ್ಮಡಿಸಿತು. ಹಾಗೆ ಹೌಹಾರಿ ಹಿಂದೆಗೆಯಲಾರಂಭಿಸಿದರು. ಓಡಿ ಹೋಗುವ ಅರಿ ಸೈನಿಕರನ್ನು ಆಚರಸನ ಕುದುರೆ ಪಡೆಯವರು ಸ್ವಲ್ಪ ದೂರ ಬೆಂಬತ್ತಿ ಚದುಸಿದರು. ವೈರಿಯನ್ನು ಹಾಗೆಯೇ ಬೆನ್ನಟ್ಟಿಕೊಂಡು ಹೋಗುವ ಕೆಲಸವನ್ನು ಆಚರಸನು ಬೆಳ್ವಲ ಮತ್ತು ಪುರಿಗೆರೆಯ ದಂಡಿನವರಿಗೆ ಒಪ್ಪಿಸಿದನು. ತನ್ನ ರಾಹುತರನ್ನು ತಿರುಗಿ ಕರೆಸಿಕೊಂಡನು.

ಮುಂದಿನ ಕಾರ್ಯದ ಮಹತ್ವವನ್ನು ಮನಗಂಡ ಆಚರಸನು ಅಲ್ಲಿ ಹೆಚ್ಚುಕಾಲ ಕಳೆಯಲಿಲ್ಲ. ತನ್ನೀ ಗೆಲುವಿನ ಮೊದಲ ಹೆಜ್ಜೆಯ ನೆನವರಿಕೆಗಾಗಿ ಆ ಅಡವಿಯಲ್ಲಿ ಚಾಲುಕ್ಯರ ಇಷ್ಟ ದೈವತವಾದ ಸೋಮೇಶ್ವರನ ಹೆಸರಿನಿಂದ ಒಂದು ಶಿವಲಿಂಗವನ್ನು ಪ್ರತಿಷ್ಠೆ ಮಾಡಿದನು. ಮುಂದೆ ಅಲ್ಲಿ ಒಂದು ಚಿಕ್ಕ ಊರು ಹುಟ್ಟಿ ಅದು ಅಡವಿ ಸೋಮಾಪುರ ಎಂಬ ಹೆಸರನ್ನು ಪಡೆಯಿತು. ಆ ಮೇಲೆ ಆಚರಸನು ಕ್ರತುಪುರಕ್ಕೆ ನಡೆದು ಅಲ್ಲಿಯ ತ್ರಿಕುಟೇಶ್ವರನಿಗೆ ರುದ್ರಾಭಿಷೇಕವನ್ನು ಸಲ್ಲಿಸಿದನು. ಕ್ರತುಪುರಕ್ಕೆ ಗದುಗು ಎಂದೂ ಕರೆಯುತ್ತಿದ್ದರು. ಅಲ್ಲಿಂದ ಆಚರಸನು ವೇಗ ವೇಗವಾಗಿ ವಾಯುವ್ಯ ದಿಶೆಯನ್ನು ಅನುಸರಿಸಿದನು.

ಆಚರಸನ ಪ್ರತಿದಿನದ ಚಲನ ವಲನಗಳ ವರ್ತಮಾನ ಕಲ್ಯಾಣನಗರಿಗೆ ತಲಪುತ್ತಿದ್ದಿತು. ಉತ್ತರ ಮತ್ತು ದಕ್ಷಿಣ ಭಾಗದ ಬಂಡುಗಾರರ ಸಕಲ ಕಾರ್ಯಕಲಾಪಗಳ ಸೂಕ್ಷ್ಮ ವೃತಾಂತವು ಗುಪ್ತಚಾರರ ಮುಖಾಂತರ ವಿಕ್ರಮಾದಿತ್ಯನಿಗೆ ಕ್ಷಣ ಕ್ಷಣವೂ ತಿಳಿಯುತ್ತಿದ್ದಿತು. ಇವುಗಳಲ್ಲಿ ಮುಖ್ಯವಾದ ಮತ್ತು ಆಚರಸನ ಕಾರ್ಯಧೋರಣೆಗೆ ಪ್ರತ್ಯಕ್ಷವಾಗಿ ಸಂಬಂಧಪಡುವ ಸಂಗತಿಗಳನ್ನು ವಿಕ್ರಮಾದಿತ್ಯನು ಆಗಾಗ ಆಚರಸನಿಗೆ ತಿಳಿಯಪಡಿಸುತ್ತಿದ್ದನು. ಹೀಗೆ ಉತ್ತರ ಪ್ರದೇಶದಲ್ಲಿ ಹೋಗುತ್ತ ಕೆಲವು ನಾಡುಗಳನ್ನು ಹಿಂದುಳಿಯಿಸಿದ ಬಳಿಕ ಒಂದು ದಿನ ಆಚರಸನಿಗೆ ಚಿಂತಾಜನಕ ವಾರ್ತೆ ಬಂದು ತಲಪಿತು. ಶಿಲಾಹರ ಭೋಜನು ದೊಡ್ಡ ಸೈನ್ಯದೊಂದಿಗೆ ಹೊರಟು ವೇಣುಪುರಿಯತ್ತ ಸಾಗಿಬರುತ್ತಿರುವನು ! ಆತನ ದಂಡು ಘಟ್ಟದ ಮೇಲಿನ ತನ್ನ ರಾಜ್ಯದಲ್ಲಿ ನಡೆದು ಹೋಗಲು ಕಾದಂಬ ಜಯಕೇಸಿ ಸಂಮತಿಸಿರುವವನಲ್ಲದೆ ಆತನ ಸಹಾಯಕ್ಕೆ ತನ್ನ ಸೈನ್ಯದ ಮೂರರಲ್ಲಿ ಒಂದು ಭಾಗವನ್ನು ಕೊಡಲೊಪ್ಪಿರುವನು ! ಎಂಬುದೇ ಆ ಸುದ್ದಿ. ಇದೀಗ ತನಗೆ ಬಲು ಬಿಕ್ಕಟ್ಟಿನ ಕಾಲ, ಎಂದು ಆಚುಗಿ ನೆನೆದುಕೊಂಡನು.

ಸೇನಾ ವಿಜ್ಞಾನದಲ್ಲಿ ನುರಿತವನಾದ ಆಚುಗಿ ಈ ವರ್ತಮಾನವನ್ನು ಮುಂಧೋರಣೆಯಿಂದ ವಿಮರ್ಶಿಸಿದನು. ಹಲವು ಗಣಿತಗಳನ್ನು ಹಾಕಿಕೊಂಡು ಗುಣಿಸಿ ನೋಡಿದನು. ಆತನ ಸಮಸ್ಯೆ ಪರಿಹಾರವಾಯಿತು. ಲೆಕ್ಕದ ಉತ್ತರ ದೊರೆಯಿತು. ಕೂಡಲೆ ಆತನು ಘಟ್ಟದ ಮೇಲಿನ ಕಾದಂಬ

ರಾಜ್ಯದ ಪ್ರಮುಖ ಪಟ್ಟಣವೂ ಆಯಕಟ್ಟಿನ ನೆಲೆಯೂ ಆದ ಪಲಸಿಗೆ ಎಂದರೆ ಹಲಸಿಯ ಕಡೆಗೆ ಅತಿ ಚಪಲತೆಯಿಂದ ತನ್ನ ದಂಡನ್ನು ಸಾಗಿಸಿದನು. ಹಲಸಿಯಿಂದ ಐದುಗಾವುದ ಅಂತರದಲ್ಲಿ ಇರುವಾಗ ಭೋಜನ ಮತ್ತು ಜಯಕೇಸಿಯ ದಂಡುಗಳು ಹಲಸಿಯ ಆಚೆ ವೇಣುಪುರದ ತೆಂಕಲಲ್ಲಿ ಕೂಡಿರುವುವಾಗಿಯೂ ಹಲಸಿಯತ್ತ ವೇಗವಾಗಿ ನಡೆದಿರುವುವಾಗಿಯೂ ಆತನಿಗೆ ವರ್ತಮಾನ ತಿಳಿಯಿತು. ಈ ಎರಡು ದಂಡುಗಳು ತಾನು ಊಹಿಸಿದುದಕ್ಕಿಂತ ಬೇಗ ಗುಡ್ಡಗಾಡಿನ ಮಾರ್ಗದಲ್ಲಿ ಇಷ್ಟು ಶೀಘ್ರವಾಗಿ ನಡೆದು ಬಂದುದನ್ನು ಕೇಳಿ ಆಚರಸನಿಗೆ ಆಶ್ಚರ್ಯವಾಯಿತು. ಆತನು ಹಲಸಿಯಿಂದ ಒಂದು ದಿನದ ಅಂತರಕ್ಕೆ ಬಂದು ಬೀಡು ಬಿಟ್ಟಿರುವಾಗ ಆ ದಂಡುಗಳು ಹಲಸಿ ಊರಲ್ಲಿ ಪ್ರವೇಶ ಮಾಡಿದುವು ಎಂಬ ಸಂಗತಿ ಆತನಿಗೆ ವಿದಿತವಾಯಿತು. ಆತ ಆಚರಸನು ಹಗೆಯ ಮುಂದಿನ ಗತಿಯನ್ನು ಇದಿರು ನೋಡುತ್ತ ತನ್ನ ಪಾಳ್ಯದಲ್ಲಿ ಉಳಿದುಕೊಂಡನು.

ಆಚರಸನು ಹಲಸಿಯ ಹತ್ತಿರವೇ ಬಂದಿರುವನು ಎಂಬ ಸಮಾಚಾರವನ್ನು ಕೇಳಿ ಕಾದಂಬ ಶಿಲಾಹಾರ ದಂಡನಾಯಕರು ಆತನನ್ನು ಸೊಗಸಾಗಿ ಕಣಿವೆಯಲ್ಲಿ ಬಲೆಹಾಕಿ ಹಣಿಯಬೇಕೆಂದು ಕುಣಿದಾಡಿದರು. ಇರುಳಲ್ಲಿಯೇ ಹಲಸಿಯಿಂದ ಹೊರಟು ಆತನ ಪಾಳ್ಯದ ಕಡೆಗೆ ಸಾಗಿದರು. ಅರಿಯ ತಂತ್ರವನ್ನು ಅವರಿಗಿಂತ ಜಾಣಾಕ್ಷತನದಿಂದ ಕಂಡು ಹಿಡಿದ ಆಚರಸನು ಇರುಳಲ್ಲಿಯೇ ಪಾಳ್ಯವನ್ನು ಕಿತ್ತು ತನ್ನ ಸೇನೆಯನ್ನು ಬೇರೊಂದು ಮಾರ್ಗದಿಂದ ಹಲಸಿಯತ್ತ ಸಾಗಿದನು. ಆತನ ಈ ಯುಕ್ತಿಯಿಂದ ಹಗೆ ಹಲಸಿಯಿಂದ ದೂರ ಅಡವಿಗೆ ಸೆಳೆಯಲ್ಪಟ್ಟನು. ಆಚರಸನು ಹಲಸಿಯ ಹತ್ತಿರಕ್ಕೆ ಬಂದುದರಿಂದ ಊರಿನ ಸೌಕರ್ಯವು ಆತನಿಗೆ ಉಂಟಾಯಿತು. ಬೆಳಗಾಗುವಷ್ಟರಲ್ಲಿ ಆತನು ಹಲಸಿಯ ಈಶಾನ್ಯಕ್ಕೆ ಸುಮಾರು ಎರಡು ಹರದಾರಿಯ ಮೇಲೆ ಇರುವ ಫಲವತಿ ಎಂಬ ತೊರೆಯ ದಂಡೆಗೆ ಬಂದನು. ಈ ಹೊತ್ತಿಗೆ ಶಿಲಾಹಾರ ಅನಂತಪೇವ ಮತ್ತು ರಟ್ಟ ಕಾರ್ತವೀರ್ಯದೇವ ಇವರು ಕಳುಹಿದ ದಂಡುಗಳು ಆತನನ್ನು ಕೂಡಿದುವು. ಆಚರಸನ ಈ ಮೋಸವನ್ನು ತಡವಾಗಿ ಅರಿತ ವೈರಿಗಳು ಆತನು ಹೋದ ದಾರಿಯಲ್ಲಿ ಹುಡುಕುತ್ತ ಹುಡುಕುತ್ತ ಬಂದರು. ಅವರು ಆ ತೊರೆಗೆ ಬರುವ ಹೊತ್ತಿಗೆ ಮಧ್ಯಾಹ್ನವಾಯಿತು. ಅಷ್ಟರಲ್ಲಿ

ಆಚರಸನ ಮತ್ತು ಆತನ ಸಹಾಯಕ ಸೈನ್ಯಗಳು ಆಹಾರ ವಿಶ್ರಾಂತಿಯನ್ನು ಪಡೆದು ಏರಾಟಕ್ಕೆ ಅಣಿಯಾಗಿದ್ದುವು.

'ಗುಡ್ಡಗಾಡು ನಾಡಿನಲ್ಲಿ ನುರಿತವರಾದ ನಮ್ಮ ಮುಂದೆ ಬಯಲು ನಾಡಿನ ಈ ಮೋಕೆಗಳ ಪಾಡೇನು? ಕ್ಷಣಕಾಲದಲ್ಲಿ ಇವುಗಳನ್ನು ಸವರಿ ಬಿಡುವೆವು' ಎಂದು ಕಾದಂಬ ಮತ್ತು ಶಿಲಾಹಾರ ದಂಡಿನವರಿಗೆ ಬಹಳ ಹೆಮ್ಮೆ ಇದ್ದಿತು. ಇದಲ್ಲದೆ ಇವರು ಬಹು ದೂರದಿಂದ ನಡೆದು ಬಂದು ದಣಿದಿರುವರು; ಅಪರಿಚಿತವಾದ ತಮ್ಮ ಮಲೆನಾಡಿನಲ್ಲಿ ಸಿಕ್ಕಿಕೊಂಡಿರುವರು; ಆದುದರಿಂದ ಅವರ ಆಟ ಬಹಳ ಹೊತ್ತು ಮುಂದುವರಿಯಲಾರದು ಎಂದು ಅವರು ಎಣಿಸಿದ್ದರು. ಈ ಹೆಮ್ಮೆಯಲ್ಲಿಯೂ ಭ್ರಮೆಯಲ್ಲಿಯೂ ಮೈಮರೆತಿದ್ದ ಅವರು ಹೆಚ್ಚು ದಕ್ಷತೆಯನ್ನು ವಹಿಸದೆ ತೊರೆಗೆ ಬಂದೊಡನೆ ಕತ್ತಿಯನ್ನು ಹಿರಿದು ಆಚರಸನ ದಂಡಿನ ಮೇಲೆ ಎರಗಿದರು.

ಇದನ್ನು ನೋಡುತ್ತಿದ್ದ ಆಚರಸನು ಬಲು ಚುರುಕಾಗಿ ಅವರನ್ನು ಬರಮಾಡಿಕೊಂಡನು. ಎರಡು ದಂಡುಗಳು ಒಂದಕ್ಕೊಂದು ಹಠಾತ್ತಾಗಿ ತಾಗಿ ತಾಕಲಾಡಿ ತಿವಿದಾಡಿದುವು. ಕಾದಾಟವು ಕರಾಲವಾಗಿ ರೂಪುಗೊಂಡಿತು. ಬಿಲ್ಲುಗಳ ಟೇಂಕಾರವು, ಅಂಬುಗಳ ಝುಂಕಾರವು, ಹಲಗೆ—ಕತ್ತಿಗಳ ಖಟ್–ಖಣಲ್ ಎಂಬ ಶಬ್ದವು, ಈಟಿ-ಭಲ್ಲೆಗಳ ಸಂಯ್-ಸೊಳಲ್ ಎಂಬ ರವವು, ಪರಶು-ಕೊಂತಗಳ ಥಫ್-ಥೊಫ್ ಎಂಬ ಸಪ್ಪಳವು, ಆನೆಗಳ ಚೀತ್ಕಾರವು, ಕುದುರೆಗಳ ಹೇಷಾರವವು, ವೀರರ ಸಿಂಹನಾದವು, ಸಂಕುಲಗೊಂಡು ನಿಬಿಡವಾಗಿ ಗಿರಿಕಂದರಗಳಲ್ಲಿ ಅಲೆಯುತ್ತ ಉಲಿಯುತ್ತ ಸುತ್ತುವರಿಯಿತು. ನೆತ್ತರ ಹಳ್ಳಗಳು ಹರಿದು ತೊರೆಗೆ ಕೂಡಿ ಹೆದ್ದೊರೆ ಆಯಿತು. ಇರುಳು ಕವಿವವರೆಗೆ ಕಾದಿದರೂ ಸೋಲು ಗೆಲುವು ಸ್ಥಿರವಾಗಲಿಲ್ಲ. ಅಂದು ಅಷ್ಟಕ್ಕೆ ಕಾದಾಟವನ್ನು ನಿಲ್ಲಿಸಿ ಇಬ್ಬಣದವರು ತಮ್ಮ ತಮ್ಮ ಪಾಳ್ಯಕ್ಕೆ ವಿಶ್ರಾಂತಿಗಾಗಿ ತೆರಳಿದರು.

ಮರು ಮುಂಜಾವ ಕಣದಲ್ಲಿ ಕಾಲಿಟ್ಟಕೂಡಲೆ ಆಚರಸನು ಭೋಜನ ಮೇಲೆ ಏರಿಹೋಗಿ ಆತನ ದಂಡವನ್ನು ಹಿಂದೂಡುತ್ತ ಅದನ್ನು ಕಾದಂಬ ದಂಡಿನಿಂದ ಅಗಲಿಸಿದನು. ಇದೇ ಕಾಲಕ್ಕೆ ಅತ್ತ ಸುಗಂಧವರ್ತಿಯ ಮತ್ತು ಕೊಂಕಣದ ದಂಡನಾಯಕರು ಕಾದಂಬ ಸೇನೆಯ ಮೇಲೆ ಮುಗಿ

ಬಿದ್ದು ಅದನ್ನು ಇನ್ನೊಂದು ಕಡೆ ಸೆಳೆದೊಯ್ದರು. ಹೀಗೆ ಇಬ್ಭಾಗವಾದ ಹಗೆಯ ಮೇಲೆ ಎರಡು ಬದಿಯಿಂದಲೂ ಕಟುತರವಾದ ಆಕ್ರಮಣ ಮುಂದು ವರಿಯಿತು. ಆಚರಸನ ಸೈನಿಕರು ಭೋಜನನ್ನು ದುಂಡುಸುತ್ತಿ ಕಗ್ಗೊಲೆ ಯನ್ನು ಪ್ರಾರಂಭಿಸಿದರು. ಅಂಬಿನ, ಕತ್ತಿಯ, ಕೊಂತದ, ಪರಶುವಿನ, ಭಲ್ಲೆಯ, ಈಟಿಯ ಇರಿತಕ್ಕೆ ತುತ್ತಾಗಿ ಆತನ ಅನುಯಾಯಿಗಳು ಪಟಪಟನೆ ಪ್ರಾಣಬಿಡತೊಡಗಿದರು. ಅವರಾ ಹೆಣದ ಹೊಸ ಗುಡ್ಡಗಳು ಆ ಗುಡ್ಡದ ನಾಡಿನಲ್ಲಿ ಇನ್ನಿನ್ನಷ್ಟು ಭೀಕರವಾಗಿ ಕಾಣಿಸತೊಡಗಿದವು. ಮಧ್ಯಾಹ್ನ ಎನ್ನು ವಷ್ಟರಲ್ಲಿ ಭೋಜನ ಮುಕ್ಕಾಲು ವೀಸೆ ಸೈನಿಕರು ಹತರಾದರು. ಇದ್ದ ಬದ್ದ ವರು ಕಂಗೆಟ್ಟು ಕಾಲಿಗೆ ಬುದ್ಧಿ ಹೇಳಿದರು.

ಹೀಗೆ ಬಲಹೀನನಾದ ಭೋಜನನ್ನು ಆಚರಸನ ಸೈನಿಕರು ಮುತ್ತಿ ಕೊಂಡು ಸೆರೆ ಹಿಡಿದರು. ತಮ್ಮ ನಾಯಕನಲ್ಲಿಗೆ ಎಳೆದುತರಲು ಅನುವಾ ದರು. ಅಷ್ಟರಲ್ಲಿ ಭೋಜನ ಪರಿವಾರದವರು ಕೆಲರು ಚೇತರಿಸಿಕೊಂಡು ಎದ್ದು ಓಡಿ ಬಂದು ಆಚರಸನ ಕಟ್ಟಾಳುಗಳ ಮೇಲೆ ಬಲವಾಗಿ ಅಪ್ಪಳಿಸಿದರು. ತಮ್ಮ ಒಡೆಯನನ್ನು ಅವರ ಕೈಯಿಂದ ಬಿಡಿಸಿಕೊಂಡು ಓಡಿ ಹೋದರು. ಈ ಹೊತ್ತಿಗೆ ಜಯಕೇಸಿಯ ದಂಡಿನ ಅವಸ್ಥೆಯಾದರೂ ಇದೇ ಮಾದರಿ ಯಾಗಿತ್ತು. ಹೀಗೆ ಹಗೆಗಳಿಬ್ಬರನ್ನು ಪುಡಿ ಪುಡಿಮಾಡಿದ ಆಚರಸನು ಜೀವ ಉಳಿಸಿಕೊಂಡು ಪಲಾಯನ ತತ್ಪರವಾಗಿದ್ದ ಅವಶಿಷ್ಟ ಶತ್ರುಸೈನ್ಯವನ್ನು ಬೆನ್ನಟ್ಟಿಕೊಂಡು ಹೋಗುವ ಕೆಲಸವನ್ನು ರಟ್ಟರ ಮತ್ತು ಕೊಂಕಣ ಪಡೆವಳ ರಿಗೆ ನಿರ್ದಿಷ್ಟಪಡಿಸಿದನು. ಬೆಂಬತ್ತಿದ ಈ ದಂಡನ್ನು ಕಂಡು ಹೌಹಾರಿದ ಭೋಜನು ತನ್ನ ಹರಕ ಮುರಕ ಪರಿವಾರದೊಂದಿಗೆ ಗುಡ್ಡದ ಪ್ರದೇಶದಲ್ಲಿ ಅಡಗುತ್ತ, ಎಡಹುತ್ತ, ಮುಗ್ಗುತ್ತ, ದಿಕ್ಕುಗೆಟ್ಟು ಹರಿದಾಡಿದನು. ಕೊಂಕಣ ದಂಡಿನವರು ರಾಜಧಾನಿಯವರೆಗೆ ಆತನನ್ನು ಬೆಂಬಿಡಲಿಲ್ಲ. ಅದೇ ಮೇರೆಗೆ ರಟ್ಟ, ಸೈನಿಕರು ಕಾದಂಬ ದಂಡಾಳುಗಳನ್ನು ಕಣಿವೆ ಮಾರ್ಗಗಳಲ್ಲಿ ನೂಕುತ್ತ ಹಿಂದೂಡುತ್ತ ಘಟ್ಟದ ಕೆಳಗೆ ತಳ್ಳಿಹಾಕಿದರು.

ಇಂತು ಹಲಸಿಯ ಕಾಳಗದಲ್ಲಿ ಜಯಶೀಲನಾದ ಆಚರಸನು ಮುಂದೆ ಹೆಚ್ಚು ಘಟ್ಟವನ್ನು ಇಳಿದು ಗೋವೆಯ ರಾಜ್ಯದಲ್ಲಿ ದಾಳಿ ಮಾಡಲು ಸಿದ್ಧತೆ ಯನ್ನು ನಡೆಸಿದನು. ಘಟ್ಟದ ಮಲೆಗಳಲ್ಲಿ ಮಲ್ಲಜಾತಿಯ ಮಲೆಪರೆಂಬ

ಶೂರ ಜನಾಂಗದವರು ವಾಸಿಸುತ್ತಿದ್ದರು. ಇವರು ಜಯಕೇಸಿಗೆ ಅಂಕಿತ ರಾಗಿದ್ದು ಆತನಿಗೆ ಕಪ್ಪವನ್ನು ತೆರುತ್ತಿದ್ದರು. ಪ್ರಸ್ತುತ ಸಂದರ್ಭದಲ್ಲಿ ಜಯಕೇಸಿ ಅವರನ್ನು ತನ್ನೆಡೆಗೆ ಒಲಿಸಿಕೊಂಡು ಚಾಲುಕ್ಯ ಸಾಮ್ರಾಜ್ಯದ ವಿರುದ್ಧವಾಗಿ ಹುರಿಗೊಳಿಸಿದ್ದನು. ಅವರು ಕಣಿವೆ ಮಾರ್ಗಗಳಲ್ಲಿ ಅಡಗಿ ಕೊಂಡು ಘಟ್ಟವನ್ನು ಇಳಿದು ಬರುವ ಆಚರಸನ ದಂಡಿಗೆ ಉಪದ್ರವಕೊಡಲು ಪ್ರಾರಂಭಿಸಿದನು. ಅವರಾ ಕಿರುಕುಳಕ್ಕೆ ಸೊಪ್ಪು ಹಾಕದೆ ಪ್ರತಿಯುಕ್ತಿ ಗಳನ್ನು ಒಡ್ಡಿ ಅವರ ವಿರೋಧವನ್ನು ಕುಗ್ಗಿಸಲು ಆಚರಸನು ಉಪಾಯ ಗಳನ್ನು ರಚಿಸಿದನು. ಈ ಕಾರ್ಯದಲ್ಲಿ ಹಲಸಿಯ ವಿಜಯವು ಆತನಿಗೆ ಬಹುವಾಗಿ ಸಹಾಯ ನೀಡಿತು. 'ಕುಂತಲ ಚಕ್ರವರ್ತಿಯ ಪ್ರಚಂಡ ಸೇನಾನಿ ಈತನು. ಅತ್ಯಂತ ಪರಾಕ್ರಮಶಾಲಿ ; ರಣಾಂಗಣದಲ್ಲಿ ಅಮಾನುಷ ರಾಕ್ಷಸ ಕೃತಿಗಳನ್ನು ಮಾಡಬಲ್ಲನು ; ಕೊಂಕಣ ಚಕ್ರವರ್ತಿ ಎನಿಸಿಕೊಳ್ಳುವ ಜಯಕೇಸಿಯ ದಂಡನ್ನೇ ಧ್ವಂಸ ಮಾಡಿದನು ; ಕಾದಂಬ ಮತ್ತು ಕರಾಡದ ಎರಡು ಸೈನ್ಯಗಳನ್ನು ಏಕಕಾಲಕ್ಕೆ ಮುರಿಬಡಿದನು.' ಮುಂತಾಗಿ ಈಗಾಗಲೆ ಆತನ ಶೌರ್ಯದ ಅದ್ಭುತ ಕತೆಗಳೂ ಪವಾಡ ಕಟ್ಟುಗಳೂ ಆ ವನ್ಯಜನರಲ್ಲಿ ಹಬ್ಬುತ್ತ ಆತನ ಬಗೆಗೆ ಭಯ ಭಕ್ತಿಯನ್ನು ಹರಡುತ್ತಿದ್ದುವು. ಈ ಭಾವನೆ ಇನ್ನಿಷ್ಟು ಬೆಳೆಯುವಂತೆ ಆಚರಸನು ತನ್ನ ಗೂಢಚಾರರ ಮುಖಾಂತರ ಪ್ರಯತ್ನಿಸಿದನು. ಇದಕ್ಕೂ ಹೆಚ್ಚಾಗಿ ಆತನು ಕೈಕೊಂಡ ಭೇದನೀತಿ ಜಯಶೀಲವಾಗಿ ಆತನ ಮಾರ್ಗವನ್ನು ನಿಷ್ಕಂಟಕಗೊಳಿಸಿತು. ದ್ರವ್ಯದ ಮತ್ತು ಪದವಿಯ ಆಸೆಯನ್ನು ಒಡ್ಡಿ ಆತನು ಅವರಲ್ಲಿಯ ಕೆಲ ನಾಯಕ ರನ್ನು ಒಡೆದುಕೊಂಡನು. ಅವರ ಮೂಲಕ ಆ ಜನಗಳ ರಹಸ್ಯಗಳನ್ನು ತಿಳಿದುಕೊಂಡು ಅವರ ಪ್ರಧಾನ ಪಾಳೆಪಟ್ಟುಗಳ ಮೇಲೆ ಆಕಸ್ಮಿಕ ವಾಗಿ ಏರಾಟವಾಡಿದನು. ಕೆಲ ಪ್ರಮುಖರನ್ನು ಸೆರೆಹಿಡಿದು ದೇಹಾಂತ ಶಿಕ್ಷೆ ಯನ್ನು ವಿಧಿಸಿದನು. ನಾಯಕರ ಈ ದುರವಸ್ಥೆಯನ್ನು ಕಂಡು ಇತರರು ಹೌಹಾರಿದರು. ಆಚರಸನ ಉಸಾಬರಿಯನ್ನು ಬಿಟ್ಟು ಬಿಟ್ಟರು.

ದಟ್ಟಡವಿ. ನಿಡುಬೆಟ್ಟ, ತೊರೆ, ಹಳ್ಳ, ಹಳುವು, ಕಣಿವೆಗಳಿಂದ ಸುರಮ್ಯ ವಾದ ಸಹ್ಯಾದ್ರಿಯ ಅಗಾಧವಾದ ಪ್ರಾಕೃತಿಕ ಐಸಿರಿಯನ್ನು ಆಲಿಸುತ್ತ ಆಚರಸನು ಅನಾಯಾಸವಾಗಿ ಘಟ್ಟವನ್ನು ಇಳಿದನು. ಘಟ್ಟದ ಈ ದಾರಿಗೆ

ಸಾಮಾನ್ಯ ಜನರು 'ಕೆಳಘಟ್ಟ' ಎಂದು ಕರೆಯುತ್ತಿದ್ದರು. ಆದರೆ ಇದರ ಮೇಲಿನ ತನ್ನ ಸ್ವಾಮಿತ್ವದ ಸೂಚಕವಾಗಿಯೂ ತನ್ನ ತಾತನ ಸ್ಮಾರಕ ರೂಪವಾಗಿಯೂ ಜಯಕೇಸಿ ಇದಕ್ಕೆ 'ಗೂಹಲ್ಲ ಘಟ್ಟ' ಎಂಬ ನಾಮಕರಣ ಮಾಡಿದ್ದನು ಹಲಸಿಯ ಕಾಳಗದಲ್ಲಿ ಜೀವ ಉಳಿಸಿಕೊಂಡು ಓಡಿ ಹೋಗಿದ್ದ ಜಯಕೇಸಿಯ ಸೈನಿಕರು ಆತನಿಗೆ ಆ ಯುದ್ಧದ ಸಮಾಚಾರವನ್ನು ಇದೀಗ ಅರುಹಿದ್ದರು. ಗೂಹಲ್ಲ ಘಟ್ಟವನ್ನು ಇಳಿದು ಆಚರಸನು ತನ್ನ ರಾಜ್ಯದಲ್ಲಿ ಕಾಲಿಕ್ಕುವ ಮೊದಲು ಆತನನ್ನು ಇದಿರಿಸಿ ಚದರಿಸಬೇಕು ಎಂಬ ಸಂಕಲ್ಪದಿಂದ ಜಯಕೇಸಿ ಬಲಾಢ್ಯವಾದ ತನ್ನ ಸೈನ್ಯದೊಂದಿಗೆ ಗೂಹಲ್ಲಗಟ್ಟದ ಕಡೆಗೆ ಸಾಗಿದ್ದನು. ಆತನು ಘಟ್ಟಕ್ಕೆ ತಲುಪುವುದಕ್ಕೆ ಮುಂಚಿತವಾಗಿ ಆಚರಸನು ಘಟ್ಟವನ್ನು ಇಳಿದು ಸಮನೆಲದ ಮೇಲೆ ವಿಶ್ರಮಿತ್ತಿದ್ದನು.

ಗೋವಾಧಿಪತಿ ತಮ್ಮನ್ನು ಇದಿರುಗೊಳ್ಳಲು ಬರುತ್ತಿರುವ ವಾರ್ತೆಯನ್ನು ಕೇಳಿ ಆಚರಸನ ಸೈನಿಕರಲ್ಲಿ ಸ್ಫೂರ್ತಿ ಸಂಚಾರವಾಯಿತು. ಕುಂತಲ ಚಕ್ರವರ್ತಿಯ ವಿಶ್ವಾಸ, ಸ್ವಾಮಿನಿಷ್ಠೆ, ಸತ್ಪಕ್ಷದ ಅಭಿಮಾನ, ಇದುವರೆಗಿನ ವಿಜಯಪರಂಪರೆ, ಪಡುವಣ ಬೆಟ್ಟವನ್ನು ಸಹ್ಯಗಿರಿಯನ್ನು ದಾಟಿ ಪಶ್ಚಿಮ ಸಮುದ್ರನಾಥನನ್ನು ಸಂದರ್ಶಿಸಲಿರುವೆವು ಎಂಬ ಸಂತೋಷ, ಇತ್ಯಾದಿ ಭಾವನೆಗಳಿಂದ ಪ್ರೇರಿತರಾದ ಅವರ ಆತ್ಮವಿಶ್ವಾಸ, ಕಾರ್ಯ, ಸಾಹಸಗಳು ಮೇರೆವರಿದುವು. ಅದಾಗ ಜಯಕೇಸಿ ಒಂದು ಆಯಕಟ್ಟಿದ ಸ್ಥಳದಲ್ಲಿ ತಂಗಿದುದು ಆಚರಸನಿಗೆ ತಿಳಿಯಿತು. ಕೂಡಲೇ ಆತನ ಮೇಲೆ ಏರಾಟಮಾಡಲ ಆಚರಸನು ತನ್ನ ಸೇನೆಗೆ ಆಜ್ಞೆಯಿತ್ತನು. ಇದ್ದಕ್ಕಿದ್ದ ಹಾಗೆ ತನ್ನ ಮೇಲೆ ಅಪ್ಪಳಿಸಿದ ಪ್ರಚಂಡವಾದ ಈ ಅಭಿಯೋಗದಿಂದ ಜಯಕೇಸಿ ಸ್ತಂಭಿತನಾದನು. ನೂರಾರು ಹರಿದಾರಿ ನಡೆದು ಬಂದಿದ್ದರೂ ಆಸರಿಯದೆ ಬೇಸರಿಯದೆ, ಕುಗ್ಗದೆ, ತಗ್ಗದೆ, ಅಪೂರ್ವ ಉತ್ಸಾಹದಿಂದ ಆಚರಸನ ಸೈನಿಕರು ತನ್ನ ದಂಡಿನವರನ್ನು ತುಂಡಿರಿಸಿ ನೆಲಕ್ಕೆ ಉರುಳಿಸುತ್ತಿರುವ ದೃಶ್ಯವನ್ನು ನೋಡಿ ಆತನ ಎದೆ ನಡುಗಿತು. ಕಣ್ಣು ಕತ್ತಲೆ ಕವಿದಿತು. ಆತನ ಸೈನಿಕರ ಸಾಹಸವು ಹುಸಿಯಾಯಿತು. ಆಚರಸನ ಕೈಮೇಲಾಯಿತು. ಜಯಕೇಸಿಯ ಸಂಕಲ್ಪಗಳೆಲ್ಲ ಮಣ್ಣುಗೂಡಿದವು. ಹತಾಶನಾಗಿ ತನ್ನ ಕೈ ಮೈಗಳನ್ನು ಕಚ್ಚಿಕೊಳ್ಳುವ ಹೊರ್ತು ಬೇರೆ ಉಪಾಯವು ಆತನಿಗೆ ಉಳಿಯಲಿಲ್ಲ.

ಹೀಗೆ ಇತ್ತ ಆ ಸಂದುಕಟ್ಟಿನ ಸ್ಥಳದಲ್ಲಿ ಜಯಕೇಸಿಯನ್ನು ಕಂಗೆಡಿಸುತ್ತಿರುವಾಗ, ಅತ್ತ ಇದಕ್ಕೂ ಹೆಚ್ಚಿನ ಇನ್ನೊಂದು ಸಾಹಸದ ಕಾರ್ಯಕ್ಕೆ ಆಚರಸನು ಕೈಹಾಕಿದನು. ಸೇನೆಯೊಂದಿಗೆ ಜಯಕೇಸಿಯನ್ನು ಆ ಕಣಿವೆಯಲ್ಲಿ ಕೆಲಕಾಲ ತಡೆದು ನಿಲ್ಲಿಸುವಂತೆ ತನ್ನ ದಂಡನಾಯಕನೊಬ್ಬಗೆ ಹೇಳಿ ಜಯಕೇಸಿಗೆ ತಿಳಿಯಗೊಡದಂತೆ ತನ್ನ ಸೈನ್ಯದ ಅರ್ಧಭಾಗವನ್ನು ಎತ್ತಿಕೊಂಡು ಆತನ ರಾಜಧಾನಿಯ ಮೇಲೆ ಏರಿಹೋಗುವುದಾಗಿ ಆಚರಸನು ನಿರ್ಧರಿಸಿದನು.

ಹಠಾತ್ತಾಗಿ ತಮ್ಮ ರಾಜ್ಯದಲ್ಲಿ ನುಗ್ಗಾಡುತ್ತ ರಾಜಧಾನಿಯತ್ತ ಸಾಗಿದ ಪ್ರಕ್ಷುಬ್ಧವಾದ ಈ ಸೈನ್ಯ ಶರಧಿಯನ್ನು ನೋಡಿ ಜಯಕೇಸಿಯ ಅಧಿಕಾರಿಗಳಿಗೆ ದಿಗ್‌ಭ್ರಮೆ ಉಂಟಾಯಿತು. ಏನು ಮಾಡಬೇಕೆಂಬುದು ಅವರಿಗೆ ತೋಚಲಿಲ್ಲ. ಅರಸನೋ ರಾಜಧಾನಿಯಿಂದ ದೂರ ಶತ್ರುಗಳ ಮುತ್ತಗೆಯಲ್ಲಿ ಸಿಕ್ಕುಬಿದ್ದಿರುವನು. ಸೈನ್ಯವೋ, ಕೆಲಭಾಗ ಹಲಸಿ ಕಾಳೆಗದಲ್ಲಿ ಹತವಾಯಿತು; ಮಿಕ್ಕುದರಲ್ಲಿ ಬಹುಭಾಗ ಅರಸನ ಜೊತೆಯಲ್ಲಿ ಇದೆ. ಇನ್ನು ರಾಜ್ಯವನ್ನು ರಕ್ಷಿಸುವ ಬಗೆ ಯಾವುದು? ಯಾವ ತಡೆಯೂ ಇಲ್ಲದೆ, ಹಾಂ ಹಾಂ ಎನ್ನುವಷ್ಟರಲ್ಲಿ ಆಚರಸನು ರಾಜಧಾನಿಗೆ ಹಾರಿ ಬಂದು ಬಿಟ್ಟನು. ನಗರ ರಕ್ಷಣೆಗೆ ಇರಿಸಿದ ಚಿಕ್ಕದಂಡನ್ನು ಸಂಹಾರ ಮಾಡಿ ಊರ ಒಳಗೆ ಪ್ರವೇಶ ಮಾಡಿದನು. ಆತನ ದಂಡಿನವರು ಆ ಪಟ್ಟಣದ ಬೀದಿಗಳಲ್ಲಿ ಅವಿರೋಧವಾಗಿ ಅಲೆದಾಡಿ ವೈಭವದ ವಸ್ತುಗಳನ್ನು ವಿಧ್ವಂಸಗೊಳಿಸಿದರು. ಒಬ್ಬ ದಳವಾಯಿ ಅರಮನೆಯ ಮೇಲೆ ಕುಣಿದಾಡುತ್ತಿರುವ ಕಪಿಧ್ವಜವನ್ನು ಕಿತ್ತು ಬಿಸುಟನು. ಪ್ರಭುತ್ವದ ಮುಖ್ಯ ಕಾರ್ಯಾಲಯವು ಅಗ್ನಿಗೆ ಆಹುತಿ ಆಯಿತು. ಪ್ರಜ್ವಲವಾದ ಈ ಹೋಮ ಕುಂಡದಲ್ಲಿ ಇನ್ನೂ ಅನೇಕ ಪ್ರಮುಖ ಕಟ್ಟಡಗಳಿಗೆ ಸ್ವಾಹಾಕಾರ ದೊರೆತಿತು. ಕೊಂಕಣ ಚಕ್ರವರ್ತಿಯ ಆ ಸೊಬಗಿನ ನಗರಿ ಆಚರಸನ ಪ್ರತಾಪ ಜ್ವಾಲೆಗಳಿಗೆ ತುತ್ತಾಗಿ ಕಳೆಗುಂದಿ ಕಪ್ಪಿಟ್ಟಿತು. ಗೋವೆಯ ಅವಸ್ಥೆಯನ್ನು ಮುಗಿಸಿದ ಬಳಿಕ ಆಚರಸನು ಉಪ್ಪಿನಕಟ್ಟಿ ಮೊದಲಾದ ಇನ್ನೂ ಕೆಲವು ಊರುಗಳನ್ನು ಸೂರೆಗೊಂಡು ಸುಟ್ಟು ಹಾಕಿದನು.

ಆಚರಸನ ಸಕಲ ಸಂಕಲ್ಪಗಳು ಇಷ್ಟದಂತೆ ನೆರವೇರಿದುವು. ಆತನು

ಹಿಂದುಳಿಸಿದ ಮಿಕ್ಕ ಸೈನ್ಯದ ಅರ್ಧಭಾಗವು ಜಯಕೇಸಿಯನ್ನು ಜರ್ಜರಗೊಳಿಸಿ, ಬಂದು ಆತನನ್ನು ಕೂಡಿತು. ಹಲಸಿಯ ವಿಜಯ ವಾರ್ತೆಯನ್ನು ಕೇಳಿದಾಗಿನಿಂದ ಆಚರಸನ ಚಲನ ವಲನಗಳನ್ನು ಲಕ್ಷಿಸಿ ಗೋವೆಯತ್ತ ಹೊರಟಿದ್ದ ಕೊಂಕಣದ ಅನಂತದೇವನು ಆಚರಸನ ಸಂದರ್ಶನಕ್ಕೆ ಬಂದನು. ತನ್ನ ಪ್ರತಿಸ್ಪರ್ಧಿಯಾದ ಜಯಕೇಸಿಯನ್ನು ನಿರ್ಜಯ ಮಾಡಿದ ವೀರ ಮೂರ್ತಿ ಆಚರಸನನ್ನು ಕಂಡು ಆತನಿಗೆ ಉಂಟಾದ ಆನಂದಕ್ಕೆ ಎಲ್ಲೆಕಟ್ಟು ನಿಲ್ಲದಾಯಿತು. ಆತನು ಪುನಃ ಪುನಃ ಆಚರಸನನ್ನು ಅಭಿನಂದಿಸಿ ಉಚಿತವಾಗಿ ಸನ್ಮಾನಿಸಿದನು.

ಕುಂತಲೇಶ್ವರನು ಒಪ್ಪಿಸಿದ ಕಾರ್ಯವನ್ನು ಕಲ್ಪನೆಗಿಂತಲೂ ಮಿಗಿಲಾದ ಜಯಶಾಲಿತೆಯಿಂದ ನೆರವೇರಿಸಿ ಕೃತಕೃತ್ಯನಾದ ಆಚರಸನು ಸ್ವಲ್ಪ ವಿಶ್ರಾಂತಿಯನ್ನು ಅನುಭವಿಸಿ ಮರಳಿ ಕಲ್ಯಾಣ ರಾಜಧಾನಿಗೆ ಹೊರಡಲು ಅನುವಾದನು. ಇದೀಗ ಅದಾವ ಅವಸರವಿಲ್ಲದುದರಿಂದ ಆತನ ಪಯಣ ಮಂದಗತಿಯಿಂದ ನಡೆಯಿತು. ಘಟ್ಟವನ್ನು ಏರಿ ಹೋಗುವ ಮಾರ್ಗದಲ್ಲಿ ಆತನಿಗೂ ಆತನ ದಂಡಿನವರಿಗೂ ಹಲವು ವಿಧದ ಸೌಕರ್ಯಗಳನ್ನು ಅನಂತದೇವರಸನು ಒದಗಿಸಿದನು.

---

## ಕಿರಣ ಎಂಟು

# ಸಂಧಾನ ಸೇತುವೆ

"ಯತಿವರ, ಕ್ಷಣಕ್ಕೊಂದು ಹುಟ್ಟಿ ಮರುಕ್ಷಣ ನಶಿಸಿ ಹೋಗುವ ಹುಲ್ಲುಗಬ್ಬದಂತೆ ನಶ್ವರವಲ್ಲ ತಮ್ಮೀಕೃತಿ. ಲೋಕಕ್ಕೆ ಚಿರಪ್ರಕಾಶವನ್ನು ನೀಡಬಲ್ಲ ಗ್ರಂಥರತ್ನವಿದು. ಶತಮಾನಗಳು ಉರುಳಿದರೂ ಇದರ ಶತ ಮಾನ್ಯತೆ ಕುಂದಲಾರದು. ಒಂದಿಲ್ಲ ಒಂದು ದಿನ ಮಿಕ್ಕ ಸಾಮ್ರಾಜ್ಯಗಳಂತೆ ಈ ನನ್ನ ಚಾಲುಕ್ಯ ಸಾಮ್ರಾಜ್ಯವೂ ಕಾಲಾಧೀನವಾಗಬಹುದು. ಆದರೆ ಪೂರ್ವದ ಜ್ಞಾನಿಗಳಿಂದ ವಿರಚಿತವಾದ ಪ್ರಾಚೀನ ಸ್ಮೃತಿ ಶಾಸ್ತ್ರಗಳನ್ನು ಆಧರಿಸಿ ರಾಜಕೀಯ ಮತ್ತು ಸಾಮಾಜಿಕ ನೀತಿ ನಿಯಮಗಳನ್ನು ನಿರ್ಧರಿ

ಸುವೆ ಈ ಗ್ರಂಥವು ಪ್ರಪಂಚಕ್ಕೆ ಪ್ರಮಾಣಭೂತವಾಗಿ ನಿಂತು ಅಳಿದು ಹೋದ ನನ್ನ ಸಾಮ್ರಾಜ್ಯದ ಮತ್ತು ಬಾಳಿ ಬಯಲಾದ ಈ ಜನಾಂಗದ ಸ್ಮೃತಿಯನ್ನು ಬಹುಕಾಲ ಬಾಳಿಸಬಲ್ಲುದು. ಮಿತವಾದ ಮಾತಿನಿಂದ ಅಮಿತ ತುಂಬಿದ ತಮ್ಮ 'ಮಿತಾಕ್ಷರಾ' ಅಕ್ಷಯವಾದ ತಮ್ಮ ಜ್ಞಾನಭಂಡಾರದ ಸ್ಥಿರಸಾಕ್ಷಿಯಾಗಿದೆ. ಯತಿರಾಜ, ಈ ಗ್ರಂಥರಾಜದ ಯೋಗ್ಯತೆಗೆ ತಕ್ಕಂತೆ ವಿಶೇಷ ವೈಭವದೊಂದಿಗೆ ಇದರ ಪ್ರಕಾಶನೋತ್ಸವವನ್ನು ಕ್ಷಿಪ್ರದಲ್ಲಿಯೇ ನೆರವೇರಿಸಲು ನನಗೆ ಅನುಜ್ಞೆಯನ್ನು ಕೊಡುವುದಾಗಿ ಬೇಡುವೆ. ಹಾಗಾದರೆ, ಒಂದು ಶುಭ ಮುಹೂರ್ತವನ್ನು—''

''ಕುಂತಲೇಶ, ಜ್ಞಾನವೆಂಬುದು ನಿತ್ಯ ಶುಭ; ನಿತ್ಯ ಮಂಗಲ. ಇತರ ಲೌಕಿಕ ಕರ್ಮಗಳಂತೆ ಜ್ಞಾನಕಾರ್ಯಕ್ಕೆ ಮುಹೂರ್ತ ನೋಡುವ ಅಗತ್ಯವಿಲ್ಲ. ಜ್ಞಾನವು ಅಜ್ಞಾನ ಎಂಬ ಅಂಧಕಾರವನ್ನು ಹೊಡೆದೋಡಿಸುವ ದಿವ್ಯಜ್ಯೋತಿ. ರಾಜನ್, ದೀಪಹೊತ್ತಿಸಲು ಮುಹೂರ್ತನೋಡುವ ಅಗತ್ಯವಿದೆಯೆ?"

''ಯತಿವರ, ತಮ್ಮ ಉಕ್ತಿ ಸತ್ಯವಾದುದೇ. ಆದರೆ ಪವಿತ್ರವೂ ಶಾಶ್ವತವೂ ಆದ ನಂದಾದೀಪವನ್ನು ಸ್ಥಾಪಿಸುವಾಗ ವಿಶೇಷ ಸಮಾರಂಭವನ್ನು ಆಚರಿಸುವುದಿಲ್ಲವೇ ಜನಗಳು? ಇಂತಹ ಲೌಕಿಕ ಸಂಪ್ರದಾಯವನ್ನು ಅನುಸರಿಸಿ ಮಾತ್ರ ನಾನು ಹಾಗೆ ಪ್ರಾರ್ಥಿಸಿದೆನು. ತಮ್ಮ ಜ್ಞಾನಭಾಂಡಾರದ ಈ ಜ್ಯೋತಿ ನನ್ನ ಧರ್ಮಸಾಮ್ರಾಜ್ಯದ ನಂದಾದೀಪವಾಗಿ ಬೆಳಗಲಿ. ಈ ನಂದಾದೀಪದ ಸ್ಥಾಪನೆ ಉಚಿತ ಸಮಾರಂಭದಿಂದ ನೆರವೇರಲಿ ಎಂಬುದೇ ನನ್ನ ಹಂಬಲ.''

"ನಿನ್ನ ಇಷ್ಟದಂತೆ ಆಗಲಿ, ಕುಂತಲೇಶ."

ವಸಂತಕಾಲದ ಆರಂಭದ ಒಂದು ದಿನ. ಏಕಾಂತದ ಮಧ್ಯಾಹ್ನದಲ್ಲಿ ವಿಕ್ರಮಾದಿತ್ಯನು ವಿಜ್ಞಾನೇಶ್ವರ ಯತಿಗಳನ್ನು ಕಾಣಲು ಕಲ್ಯಾಣನಗರಿಯ ಹೊರಗೆ ಪೂರ್ವಭಾಗದಲ್ಲಿ ಇರುವ ಅವರ ಮಠಕ್ಕೆ ಬಂದಿದ್ದನು. ಔಪಚಾರಿಕ ಕುಶಲಪ್ರಶ್ನೆಗಳಾದನಂತರ ವಿಜ್ಞಾನೇಶ್ವರರು ರಚಿಸುತ್ತಿರುವ 'ಮಿತಾಕ್ಷರಾ' ಗ್ರಂಥವನ್ನು ಕುರಿತು ವಿಕ್ರಮಾದಿತ್ಯನು ಪ್ರಸ್ತಾಪಿಸಿದನು. ಆ ಗ್ರಂಥವು ಅದೀಗ ಸಮಾಪ್ತವಾದುದನ್ನು ತಿಳಿಸಿ ಅದರೊಳಗಿನ ಕೆಲಭಾಗಗಳನ್ನು ಯತಿ

ಗಳು ಆತನಿಗೆ ಓದಿ ತೋರಿಸಿದರು. ಅದನ್ನು ಕೇಳಿ ಆನಂದಿತನಾದ ವಿಕ್ರಮಾದಿತ್ಯನು ಯತಿಯೊಡನೆ ಮೇಲೆ ವಿವರಿಸಿದಂತೆ ಸಂಭಾಷಣೆಯನ್ನು ಬೆಳಸಿದನು. ಅವರ ಮಾತುಗಳು ಮುಂದುವರಿದುವು.

"ಯತಿವರ, ಈ ಉತ್ಸವವಲ್ಲದೆ ಇನ್ನೊಂದು ಉತ್ಸವವನ್ನೂ ನೆರವೇರಿಸುವ ಸಂದರ್ಭ ಸ್ವಲ್ಪ ದಿನಗಳಲ್ಲಿಯೆ ಬರುವುದಾಗಿ ಕಾಣುತ್ತದೆ. ಮಹಾದಂಡನಾಯಕ ಮಹಾಮಂಡಲೇಶ್ವರ ಆಚರಸನ ಅಪೂರ್ವ ವಿಜಯವಾರ್ತೆಯೆಲ್ಲ ತಮಗೆ ತಿಳಿದಿರಲು ಸಾಕು. ಯತಿರಾಜ, ಆತನು ಇನ್ನೂ ಸ್ವಲ್ಪ ದಿನಗಳಲ್ಲಿಯೇ ರಾಜಧಾನಿಗೆ ಬಂದು ಸೇರುವನು. ಇಂತು ಘನವಾದ ವಿಜಯಗಳನ್ನು ಸಂಪಾದಿಸಿ ಸಾಮ್ರಾಜ್ಯದ ಗೌರವವನ್ನು ಹೆಚ್ಚಿಸಿದ ನಿಮಿತ್ತ, ವಿಜಯೋತ್ಸವದ ಮೂಲಕ ಆತನನ್ನೂ ನಮ್ಮ ಇತರ ಯೋಧರನ್ನೂ ಸತ್ಕರಿಸುವುದು ಯುಕ್ತವಲ್ಲವೆ?"

ಯತಿಗಳು ಕೆಲನಿಮಿಷ ಮೌನವಾಗಿದ್ದರು. ಆ ಮೇಲೆ ಮೆಲ್ಲನೆ ನುಡಿದರು: "ಕುಂತಲೇಶ, ಈ ವಿಜಯದಿಂದ ನಿನ್ನ ಸಾಮ್ರಾಜ್ಯಕ್ಕೆ ನಿಜವಾದ ಗೌರವವೇ?"

ಮರ್ಮಹತನಾದಂತೆ ವಿಕ್ರಮಾದಿತ್ಯನು ಬೆಚ್ಚಿಬಿದ್ದನು. ಸ್ವಲ್ಪಹೊತ್ತು ವಿಚಾರದಲ್ಲಿ ಮುಳುಗಿ ಬಳಿಕ ಮಾತನ್ನು ತೀಲಿಸಿದನು: "ಯತಿವರ, ತಮ್ಮ ಪ್ರಶ್ನೆಗೆ ಉತ್ತರ ಹೇಳುವುದು ಹಗುರಲ್ಲ. ಯಾವುದು ವಿಜಯವೆಂದೂ ಸಾಮ್ರಾಜ್ಯಶಕ್ತಿಯ ಮಹಾಗೌರವವೆಂದೂ ನಂಬಿದ್ದೆನೋ ಅದು ಎಷ್ಟು ಕ್ಷಣಿಕವೆಂಬುದರ ಅರಿವು ನಿನ್ನೆಯಿಂದ ನನಗೆ ಮತ್ತೆ ಅನುಭವಕ್ಕೆ ಬರುತ್ತಲಿದೆ."

"ಅದು ಹೇಗೆ, ರಾಜನ್?"

"ಆಚರಸನ ದಂಡ ವಿಧಾನದಿಂದಾಗಿ ಸಾಮ್ರಾಜ್ಯ ದ್ರೋಹಿಗಳ ಬೆನ್ನೆಲುವು ಮುರಿದು ಹೋಯಿತು; ಇನ್ನು ಅವರ ತಲೆಯೆತ್ತಲಾರರು; ನನ್ನ ರಾಷ್ಟ್ರದಲ್ಲಿ ಸುಖಶಾಂತಿ ನೆಲೆಗೊಳ್ಳುವುದು; ಎಂದು ಬಹುವಾಗಿ ಎಣಿಸಿದ್ದೆನು. ಆದರೆ—"

"ಆದರೆ—ಏನು, ಕುಂತಲೇಶ?"

"ನನ್ನ ಮನೋರಥವು ಮತ್ತೆ ಬೇಗನೆ ತತ್ತರಿಸುವುದು ಎಂದು ತೋರುತ್ತದೆ. ನಿನ್ನೆಯಿಂದ ಬರುತ್ತಿರುವ ಸುದ್ದಿಗಳು ನನಗೆ ಅಸಮಾಧಾನವನ್ನು ಉಂಟುಮಾಡಿವೆ. ಸಾಮ್ರಾಜ್ಯ ದ್ರೋಹಿಗಳು ಇನ್ನೊಮ್ಮೆ ತಲೆಯೆತ್ತುವ ಉದ್ಯೋಗದಲ್ಲಿ ಇದ್ದಾರೆಂದು ಎರಡು ಕಡೆಯ ವರ್ತಮಾನಗಳಿಂದ ಬಲಪಡುತ್ತಲಿದೆ. ತನ್ನ ಸಹಕಾರಿಗಳ ಸೋಲಿನಿಂದ ಬಿಟ್ಟಿಗನು ಹತಾಶನಾಗಿಲ್ಲವೆಂದೂ ಹೆಚ್ಚಿನ ಸಮರ ಸಿದ್ಧತೆ ನಡೆಸಿರುವನೆಂದೂ ಒಂದು ದಿಕ್ಕಿನ ಸಮಾಚಾರ. ಆಚರಸನ ಇರಿತದಿಂದ ಗಾಯಗೊಂಡ ಜಯಕೇಸಿ ನರುಳುತ್ತ ಬೀಳದೆ ಹೆಬ್ಬುಲಿಯಂತೆ ಆರ್ಭಟಿಸಿ ಸೇಡಿಗಾಗಿ ಹವಣಿಸುತ್ತಿರುವನಂತೆ. ಆಚರಸನ ವಿಜಯವನ್ನು ಅಭಿನಂದಿಸಿ ಆತನನ್ನು ಸಂಭ್ರಮದಿಂದ ಬೀಳ್ಕೊಟ್ಟ ಕೊಂಕಣದ ಅನಂತಪಾಲದೇವನು ಈ ನಡುವೆ ಕಾಲವಶವಾಗಿರುವನು. ಇದರಿಂದ ಜಯಕೇಸಿಯ ಮಾರ್ಗದಲ್ಲಿಯ ಆತಂಕವು ದೂರವಾಗಿ ಆತನ ಮಹತ್ವಾಕಾಂಕ್ಷೆ ಗರಿಕೆದರಿ ನಿಂತಿದೆ. ಕೊಂಕಣ ಚಕ್ರವರ್ತಿ ಎನಿಸಿ ಪಶ್ಚಿಮ ಕರಾವಳಿಯ ಏಕಾಧಿಪತ್ಯವು ತನ್ನದಾಗಬೇಕೆಂಬುದು ಆತನ ಹಿರಿಯಾಸೆ. ಇದು ಇನ್ನೊಂದು ದಿಕ್ಕಿನ ವೃತ್ತಾಂತ. ಈ ಸಾಹಸಿಗಳಿಬ್ಬರು ಸಾಮ್ರಾಜ್ಯ ಶಕ್ತಿಯನ್ನು ಇದಿರಿಸಲಿಕ್ಕೆ ಸಮರ್ಥರಾಗಲು ಇನ್ನೂ ಸ್ವಲ್ಪ ಕಾಲವಾದರೂ ಕಳೆಯಬೇಕು. ಆದರೆ ಈ ಲಕ್ಷಣಗಳು ಸರಿಯಲ್ಲ"

"ರಾಜನ್, ರಾಜನೀತಿಯ ಗೆಲವಿನ ಗುಟ್ಟು ದಂಡೋಪಾಯವನ್ನೇ ಸದಾ ಆಶ್ರಯಿಸಿಕೊಂಡಿರುವುದಿಲ್ಲ. ದಂಡವು ನಿರುಪಾಯದ ಉಪಾಯವಲ್ಲದೆ ನಿರಂತರದ ಉತ್ತಮ ಉಪಾಯವಲ್ಲ. ಗಾಯಗೊಳಿಸಿದವನನ್ನು ಹೆಚ್ಚಿಗೆ ನೋಯಿಸದೆ ಆರೈಕೆಯಿಂದ ಸಂತಯಿಸುವುದು ಮೇಲಲ್ಲವೆ ?"

"ಯತಿವರ, ನನ್ನ ಹೃದಯವು ತಮಗೆ ಅರಿದಲ್ಲ. ನನ್ನ ಜೀವನನಿಷ್ಠೆ ಶಾಂತಿರತಿಯಲ್ಲದೆ ಸಮರಾಸಕ್ತಿ ಅಲ್ಲ. ಶಾಂತಿ ಸ್ಥಾಪನೆಗೋಸುಗ ನಾನು ಎಷ್ಟು ಪರಿಯಿಂದ ಶ್ರಮಿತ್ತಿರುವೆನು ಎಂಬುದನ್ನು ತಮಗೆ ವಿವರಿಸಿ ಹೇಳಬೇಕಾಗಿಲ್ಲ. ಆದರೆ ನನ್ನಂತೆ ಇತರರೂ ಹೀಗೆ ಭಾವಿಸಿ ಆಚರಿಸದೇ ಹೋದರೆ ನನ್ನೊಬ್ಬನಿಂದ ಶಾಂತಿಯನ್ನು ರಕ್ಷಿಸುವುದು ಹೇಗೆ ತಾನೆ ಸಾಧ್ಯ? ಯತಿರಾಜ, ಪ್ರಸ್ತುತ ಸಂದರ್ಭದಲ್ಲಿ ತಾವು ಇದೀಗ ಸೂಚಿಸಿದ ಶಾಂತಿ ಸಾಧನೆ

ಯನ್ನು ಪ್ರತ್ಯಕ್ಷವಾಗಿ ಆಚರಿಸುವ ರೀತಿಯನ್ನು ಸ್ವಲ್ಪ ಸ್ಫುಟವಾಗಿ ತಿಳುಹಿ ಉಪಕೃತನನ್ನು ಮಾಡಬೇಕು.''

''ಕುಂತಲೇಶ, ನಿನ್ನನ್ನು ಪ್ರತಿಭಟಿಸಲು ಮತ್ತೆ ಅಣಿಯಾಗುತ್ತಿರುವ ಈ ಜಟ್ಟಿಗಳಿಬ್ಬರಲ್ಲಿ ಆ ಬಿಟ್ಟಿದೇವನನ್ನು ಏಕಾಕಿಯಾಗಿ ಬಿಟ್ಟುಬಿಡು. ಸಾಮಮಾರ್ಗದಿಂದ ಜಯಕೇಸಿಯನ್ನು ನಿನ್ನವನನ್ನಾಗಿ ಮಾಡಿಕೋ. ಪ್ರಾಯದವನೂ ಉತ್ಸಾಹಿಯೂ ಆದ ಆತನ ಮಹತ್ವಾಕಾಂಕ್ಷೆಗೆ ಕೈಕಾಲು ಚಾಚಲು ಎಡೆಬೇಕು. ಅದಕ್ಕಾಗಿ ಪಶ್ಚಿಮ ಕರಾವಳಿಯ ಮೇಲಿನ ನಿನ್ನ ಕಟಾಕ್ಷವನ್ನು ಸಂಕ್ಷೇಪಗೊಳಿಸಿಕೋ. ಮಧ್ಯ ದೇಶದ ಯಾವ ಅರಸನಿಗೂ ಆ ಪ್ರದೇಶದ ಸಂಪೂರ್ಣ ಸ್ವಾಮಿತ್ವವು ಲಭಿಸಿಲ್ಲ. ನಿನಗಾದರೂ ಅದರ ಆಸೆ ಬೇಡ. ಕೊಂಕಣ ಚಕ್ರವರ್ತಿ ಎನಿಸಿಕೊಳ್ಳುವ ತನ್ನ ಆ ಪ್ರಾದೇಶಿಕ ಚಕ್ರವರ್ತಿತ್ವವನ್ನು ಒಪ್ಪಿಕೊಳ್ಳುವುದರಿಂದ ನಿನ್ನ ಸಾರ್ವಭೌಮ ಚಕ್ರಾಧಿಪತ್ಯಕ್ಕೆ ಅಗೌರವವಿಲ್ಲ. ಈ ರಾಜಕೀಯ ಅನುಬಂಧವನ್ನು ಇನ್ನೊಂದು ಬಲವಾದ ಬಂಧನದಿಂದ ಭದ್ರಪಡಿಸು, ಹಾಗಾದರೆ ಸಾಮ್ರಾಜ್ಯದ ಮೇಲಿನ ಈ ಸಂಕಟ ದೂರಾಗುವುದು.''

''ಯತಿವರ, ಆ ಇನ್ನೊಂದು ಬಲವಾದ ಬಂಧನ ಯಾವುದು?''

''ರಾಜನ್, ಇದು ಸೂಕ್ಷ್ಮ ವಿಷಯ. ಇದರ ಅಭಿಪ್ರಾಯ ನಿನ್ನ ಪೂರ್ವ ಚರಿತ್ರೆಯನ್ನು ನೆನೆದುಕೊಂಡರೆ ಸ್ಪಷ್ಟವಾಗುವುದು ಪುಣ್ಯ ಸ್ಮರಣೀಯರಾದ ನಿನ್ನ ತಂದೆ ಸೋಮೇಶ್ವರರ ಆಳಿಕೆಯಲ್ಲಿ ಗಂಗವಾಡಿ, ಬನವಾಸಿ ನಾಡುಗಳನ್ನು ಆಳುವ ಬಲಿಷ್ಠ ಮಹಾಮಂಡಲೇಶ್ವರನಾದ ನಿನ್ನಿಂದ ಚೋಳ ರಾಜ್ಯಕ್ಕೆ ಭೀತಿ ಉಂಟಾಗಲು ಚೋಳರಾಜ ವೀರರಾಜೇಂದ್ರ ದೇವನು ತನ್ನ ಕನ್ನೆಯನ್ನು ನಿನಗೆ ಧಾರೆಯೆರೆದು ನಿನ್ನ ಬಾಂಧವ್ಯ ಸಹಕಾರವನ್ನು ಪಡೆಯಲಿಲ್ಲವೆ? ಇದಲ್ಲದೆ ಇದೀಗಿನ ಸಂದರ್ಭವನ್ನು ಬದಿಗಿರಿಸಿದರೆ ಗೋವೆಯ ಕಾದಂಬ ಮನೆತನದವರು ಚಾಲುಕ್ಯ ಸಿಂಹಾಸನಕ್ಕೆ ಯಾವಾಗಲೂ ವಿಧೇಯರಾಗಿ ಸಾಮ್ರಾಜ್ಯ ವಿಶೇಷ ಸೇವೆಯನ್ನು ಸಲ್ಲಿಸಿದ್ದಾರೆ. ಮೇಲಾಗಿ ಅವರಿಗೂ ನಿನ್ನ ಮನೆತನಕ್ಕೂ ಹಿಂದೆ ನಡೆದುಬಂದ ಬಾಂಧವ್ಯವೂ ಇರುವುದು.''

“ಯತಿವರ ; ತಮ್ಮೀ ವಿವರಣೆಯ ಬೆಳಕಿನಲ್ಲಿ ತಾವು ಹಿಂದೊಮ್ಮೆ ಇಲ್ಲಿ ಒಡಪಿನಂತೆ ನುಡಿದ ಕೆಲವು ವಾಕ್ಯಗಳ ಗಹನವಾದ ರಹಸ್ಯವು ಇದೀಗ ನನಗೆ ಮನವರಿಕೆಯಾಗುತ್ತಲಿದೆ. ಈ ಲೋಕದ ಅಜ್ಞಾನದ ಅಂಧಕಾರದಲ್ಲಿ ಥಳಿಲನೆ ಮಿಂಚಿನಂತೆ ಮುಂಬೆಳಕನ್ನು ತೋರುವ ಅಲೌಕಿಕ ಶಕ್ತಿ ಅಧ್ಯಾತ್ಮದಲ್ಲಿ ಅವಿತುಕೊಂಡಿದೆ ಎಂಬುದನ್ನು ಮಾನವರು ಮತ್ತೆ ಮತ್ತೆ ಮರೆಯುವರು ! ಯತಿರಾಜ, ತಮ್ಮೀ ಸೂಚನೆಯನ್ನು ನಾನು ಅನುಷ್ಠಾನಕ್ಕೆ ತರಲು ಪ್ರಯತ್ನಿಸುವೆ.”

“ರಾಜನ್, ರಾಜನಂದಿನಿಯ ಮನದೊಲವು ಹೇಗಿದೆ ಎಂಬುದನ್ನು ಅಳೆದು ನೋಡಿರುವೆಯಾ ?”

“ಸರಿಯಾಗಿ ಇಲ್ಲ. ಆಕೆಯ ಮಾತೃಸ್ಥಾನದಲ್ಲಿಯೂ ಗುರುಸ್ಥಾನದಲ್ಲಿಯೂ ಇರುವ ಐರಿಯರಸಿ ಆಕೆಯ ಹೃದಯದ ನೆಲೆಯನ್ನು ಕಂಡು ಹಿಡಿಯಲು ಕೆಲವೊಂದು ಸಂದರ್ಭದಲ್ಲಿ ಪ್ರಯತ್ನಿಸಿ ಜಯಶೀಲಳಾಗಿಲ್ಲ. ಯುವತಿಯರ ರೀತಿಯೇ ಇಂತಹುದು. ಅದರಲ್ಲಿ ಇವಳಂತೂ ಮಿಗಿಲಾದ ವಿನಯವತಿ. ಹಿಂದೊಮ್ಮೆ ಹೀಗೆಯೇ ಪ್ರಸ್ತುತ ರಾಜಕೀಯ ವಿಷಯವನ್ನು ಕುರಿತು ಆಕೆಯೊಡನೆ ಆಲೋಚಿಸುತ್ತಿರುವಾಗ, ‘ಅಂತಹ ಸಂದರ್ಭವೇನಾದರೂ ಬಂದರೆ ನನ್ನ ಜನಾಂಗಕ್ಕಾಗಿ ನಾನು ನನ್ನ ಪರಿಯಿಂದ ತ್ಯಾಗ ಮಾಡಲು ಸಿದ್ಧಳು’ ಎಂದು ಆಕೆ ಉಸುರಿರುವಳು. ಆದರೆ ಆಕೆಯ ಈ ಮಾತನ್ನು ಒರೆಗೆ ಹಚ್ಚಿ ನೋಡಲು ನನಗೆ ಇಷ್ಟವಿಲ್ಲ. ವಿವಾಹದಂತಹ ಆತ್ಮ ಸಂತೋಷದ ವಿಷಯದಲ್ಲಿ ಬಾಲೆಯರ ಮೇಲೆ ಯಾವ ಬಗೆಯ ಬಲವಂತವೂ ಬರಕೂಡದು ಎಂಬುದು ನನ್ನ ಅಭಿಮತ. ಸಾಲದುದಕ್ಕೆ ಅವಳು ತಾಯಿಯಿಲ್ಲದ ಮಗು !”

“ಕುಂತಲೇಶ, ನಿನ್ನ ಅಭಿಪ್ರಾಯ ಬಹು ಸಾಧುವಾದುದು. ಮನಸ್ಸಿಲ್ಲದ ಮದುವೆ ಮನೆತನಕ್ಕೆ ಮೃತ್ಯು. ಆದರೆ ಶ್ರೀಮುಕುಂದನ ದಯೆಯಿಂದ ಎಲ್ಲವು ಅನುಕೂಲವಾಗಬಹುದು.”

“ಹಾಗಾದರೆ, ಮೈಳಲೆಯ ಮನದೊಲವನ್ನು ಕಂಡು ಜಯಕೇಸಿಯ ಬಳಿಗೆ ರಾಯಭಾರವನ್ನು ಕಳುಹಲೇ ? ಆದರೆ—ಯತಿವರ.”

"ಆದರೆ- ಏನು, ಕುಂತಲೇಶ?"

"ಜಯಕೇಸಿ ನನ್ನೀ ಸ್ನೇಹದ ಸೂಚನೆಯನ್ನು ಹೇಗೆ ಸ್ವೀಕರಿಸುವನೋ?"

"ಅನುಮಾನಿಸುವುದೇಕೆ, ಕುಂತಲೇಶ? ನಿನ್ನಂತಹ ಪರಮೇಶ್ವರ ಸಾರ್ವಭೌಮ ಚಕ್ರವರ್ತಿಯ ಇಂತಹ ಮಧುರ ಸ್ನೇಹಾನುಬಂಧವನ್ನು ನಿರಾಕರಿಸುವಷ್ಟು ಗಾವಿಲನೇ ಅವನು? ನನ್ನೀ ಸೂಚನೆಯನ್ನು ಆತನು ಮನ್ನಿಸುವನಲ್ಲದೆ, ಇದರಿಂದ ತನ್ನನ್ನು ಧನ್ಯನಾಗಿಯೇ ಭಾವಿಸುವನು. ಕೂಡಲೆ ವಿರೋಧವನ್ನು ತೊರೆದು ನಿನಗೆ ಅನುಕೂಲನಾಗಿ ವರ್ತಿಸುವನು."

"ಯತಿವರ, ಈ ಸಂಧಾನದ ಸಫಲತೆಯಲ್ಲಿ ಆಚರಸನ ವಿಜಯ ಯಾತ್ರೆಯ ಸಾರ್ಥಕತೆಯೂ ಕೂಡಿದೆ. ಆದುದರಿಂದ ಆ ವಿಜಯೋತ್ಸವವನ್ನು ಕೆಲದಿನ ಮುಂದಿರಿಸುವೆ."

"ಸರಿ, ಭದ್ರವಾದ ಈ ಸಂಧಾನ ಸೇತುವೆಯ ಮೇಲಿಂದಲೇ ಆಚರಸನ ವಿಜಯರಥವು ಸಾಗಿಹೋಗಲಿ. ರಾಜನ್, ಆ ಉತ್ಸವದೊಡನೆ ಇನ್ನೊಂದು ಸಮಾರಂಭವು ಸಾಂಗವಾಗುವುದು ಇಷ್ಟ. ಕಳೆದ ವಾರ ಕಾಶ್ಮೀರದ ದಿಗ್ದಂತಿ ವಿದ್ಯಾಪತಿ ಕವಿರಾಜ ಬಿಲ್ಹಣನು ಈ ಮಠಕ್ಕೆ ಬಂದಿದ್ದನು. ಬಹಳ ಹೊತ್ತಿನವರೆಗೆ ಇಬ್ಬರೂ ಕಾವ್ಯಶಾಸ್ತ್ರ ವಿನೋದದಲ್ಲಿ ನಲಿದಾಡಿದೆವು. ಆತನು ನಿನ್ನ ಚರಿತ್ರೆಯನ್ನು ಕುರಿತು ಒಂದು ಕಾವ್ಯಗಂಥವನ್ನು ರಚಿಸಿರುವನು. ನಿನ್ನ ಜೀವನದಲ್ಲಿಯ ಹಲವಾರು ಸಂದರ್ಭಗಳನ್ನು ಮಹಾಕಾವ್ಯದ ರೀತಿಯಲ್ಲಿ ಬಹು ಅಲಂಕಾರಿಕವಾಗಿ ವರ್ಣಿಸಿದ್ದಾನೆ. ಆ ಗ್ರಂಥವು ಇದೀಗ ಸಮಾಪ್ತವಾಗಿದೆ. ಅದರ ಪ್ರಕಟನೋತ್ಸವವನ್ನು ಯಾವಾಗ ಮಾಡುವೆ."

"ಯತಿವರ, ಈ ರಾಜಕೀಯ ಗಲಭೆಯ ಮೂಲಕ ಬಹು ದಿನಗಳಿಂದ ವಿದ್ಯಾಪತಿಗಳ ವಿಶೇಷ ಸಮಾಗಮ ಲಾಭವು ನನಗೆ ದೊರೆತಿರುವುದಿಲ್ಲ. ಅವರ ಹಲವಾರು ರಚನೆಗಳನ್ನು ನಾನು ಓದಿ ಕೇಳಿ ಸವಿದಿದ್ದೇನೆ. ಆದರೆ ಈ ವಿಷಯವನ್ನು ಅವರು ಇದುವರೆಗೆ ನನಗೆ ಹೇಗೋ ಸಾಕ್ಷಾತ್ತಾಗಿ ಹೇಳಿಯಿಲ್ಲ. ಕೆಲದಿನಗಳ ಹಿಂದೆ ಅವರ ಶಿಷ್ಯನೊಬ್ಬನು ನನ್ನ ಚರಿತ್ರೆಯ ಮೇಲೆ ಅವರು ಕಾವ್ಯವನ್ನು ಕಟ್ಟುತ್ತಿರುವರು ಎಂದು ಸೂಚಿಸಿದನು. ಆದರೆ ಈ

ವಿಚಾರವಾಗಿ ವಿದ್ಯಾಪತಿಗಳನ್ನು ವಿಚಾರಿಸುವುದು ನನಗೆ ಸಾಧ್ಯವಾಗಿಲ್ಲ. ಮಾಡಿ ಮುಗಿಸಿದ ಮುನ್ನ ಸುಮ್ಮನೆ ಮಾತನಾಡಲೇಕೆ ಎಂದು ಅವರು ಈ ಸಂಗತಿ ನನಗೆ ತಿಳಿಸಿರಲಿಕ್ಕಿಲ್ಲ. ಈ ಸಂದರ್ಭದಲ್ಲಿ ನಾನು ಹೆಚ್ಚಿಗೆ ಮಾತನಾಡಲಾರೆನು.''

''ಕುಂತಲೇಶ, ಕಾಶ್ಮಿರನಿವಾಸಿಯಾದ ವಿದ್ಯಾಪತಿ ನಿನ್ನ ಆಸ್ಥಾನದಲ್ಲಿ ಬಂದು ನೆಲಸಿದುದು ಅಪಾರವಾದ ನಿನ್ನ ವಿದ್ಯಾಪಕ್ಷಪಾತದ ಚಿರಂತನ ಸಾಕ್ಷಿ ಯಾಗಿದೆ. ಚಿನ್ನಕ್ಕೆ ಪರಿಮಳವಿಟ್ಟಂತೆ ನಿಮ್ಮೀ ಸಮಾಗಮವನ್ನು ನೆನೆದಾಗ ಲೊಮ್ಮೆ ನನಗೆ ಬಹಳ ಸಂತೋಷವಾಗುತ್ತದೆ. ಕಾಶ್ಮೀರದ ನಾಮಾಂಕಿತ ಪಂಡಿತರ ಮನೆತನದಲ್ಲಿ ಹುಟ್ಟಿ ಜ್ಯೇಷ್ಠಕಲಶ ಮತ್ತು ನಾಗಾದೇವಿ ಎಂಬ ತನ್ನ ನಾಮಾಂಕಿತ ತಂದೆ ತಾಯಿಗಳಿಗೆ ಧನ್ಯತೆಯನ್ನು ತಂದಿತ್ತ ಭಾಗ್ಯಶಾಲಿ ಸುಪುತ್ರನೀ ಬಿಲ್ಹಣ. ಅತ್ಯಂತ ಮೇಧಾವಿ, ಶಾಸ್ತ್ರದಂತೆ ಕವಿತ್ವದಲ್ಲಿಯೂ ಕುಶಲಮತಿ. ಚಿಕ್ಕಪ್ರಾಯದಲ್ಲಿಯೇ ವೇದ, ಮಹಾ ಭಾಷ್ಯ, ಅಲಂಕಾರ, ಇತ್ಯಾದಿ ಶಾಸ್ತ್ರಗಳಲ್ಲಿ ಪಾಂಡಿತ್ಯವನ್ನು ಸಂಪಾದಿಸಿದನು. ವಿದ್ಯಾವಿಜಯದ ಉದ್ದೇಶವನ್ನು ಇಟ್ಟುಕೊಂಡು ದೇಶಸಂಚಾರ ಹೊರಟು ಬೇರೆ ಬೇರೆ ರಾಜ್ಯ ಗಳ ವಿದ್ಯಾವಂತರನ್ನು ಸಂಧಿಸುತ್ತ, ಆಸ್ಥಾನಪಂಡಿತರನ್ನು ಪರೀಕ್ಷಿಸುತ್ತ, ಉತ್ತರಾಪಥದ ಕನೋಜ, ಕಾಶಿ, ಪ್ರಯಾಗ, ಮಧುರೆ, ವೃಂದಾವನ, ಸೋಮನಾಥ ಪ್ರಮುಖ ಪುಣ್ಯಕ್ಷೇತ್ರಗಳನ್ನು ಸಂದರ್ಶಿಸುತ್ತ ದಕ್ಷಿಣಭಾರ ತಕ್ಕೆ ಬಂದನು. ಇಲ್ಲಿಯ ಗೋಕರ್ಣ, ರಾಮೇಶ್ವರಾದಿ ತೀರ್ಥಯಾತ್ರೆಗಳನ್ನು ಪೂರ್ಣ ಮಾಡಿದನು. ಆತನು ಹೀಗೆ ಪ್ರಯಾಣ ಮಾಡುತ್ತಿರುವಾಗ ಅಲ್ಲಲ್ಲಿಯ ಅನೇಕ ರಾಜರು ಆತನ ವಿದ್ವತ್ತನ್ನೂ ಪ್ರತಿಭೆಯನ್ನೂ ಕಂಡು ಆಕರ್ಷಿತರಾಗಿ ತಮ್ಮ ಆಶ್ರಯಕ್ಕೆ ಬಂದು ಆ ಸ್ಥಾನಗಳನ್ನು ಅಲಂಕರಿಸಲು ಆತನಿಗೆ ಆಹ್ವಾನವಿತ್ತರು. ಆದರೆ ಅವುಗಳಿಗೆ ಈತನು ಮನಸೋಲಲಿಲ್ಲ. ಕೊನೆಗೆ ನಿನ್ನೊಬ್ಬನ ಅವುತಣವು ಮಾತ್ರ ಆತನ ಮನಸ್ಸಿಗೆ ಹಿಡಿಯಿತು. ಇದುವೊಂದು ತನಗೆ ತಕ್ಕ ಎಡೆ ಎಂದು ಭಾವಿಸಿ ಆತನು ನಿನ್ನ ಬಿನ್ನಹವನ್ನು ಮನ್ನಿಸಿ ಕಲ್ಯಾಣ ನಗರಿಗೆ ಬಂದು ಬಿಟ್ಟನು. ನೀನು ಆತನಿಗೆ ನಿನ್ನ ರಾಷ್ಟ್ರ ದಲ್ಲಿಯ ಅತ್ಯುನ್ನತವಾದ ವಿದ್ಯಾಪದವಿಯನ್ನು ನೀಡಿ ವಿದ್ಯಾಪತಿ ಎಂಬ ಗೌರ ವದ ಸ್ಥಾನವನ್ನು ಕಲ್ಪಿಸಿಕೊಟ್ಟೆ. ಕವಿರಾಜನ ಆಗಮನವು ನಿನ್ನ ರಾಜಸಭೆ

ಯನ್ನು ವಿಶೇಷವಾಗಿ ಶೋಭೆಗೊಳಿಸಿದಂತೆ, ನಿನ್ನ ಉದಾರ ಆಶ್ರಯವು ಕವಿ ರಾಜನಿಗೆ ಶ್ರೇಷ್ಠವಾದ ವಿದ್ಯಾಗೌರವ, ವಿಪುಲವಾದ ಲೌಕಿಕ ಸ್ವಾಸ್ಥ್ಯ ಮತ್ತು ಬಹು ಅನುಕೂಲವಾದ ಪರಮಾರ್ಥ ಸಾಧನೆಯನ್ನು ಒದಗಿಸಿತು. ಜೈತ್ರಯಾತ್ರೆಗೆ ಹೊರಟಾಗಲೂ ನೀನು ನಿನ್ನೀ ವಿದ್ಯಾಪತಿಯನ್ನು ಆಗಲುವು ದಿಲ್ಲ. ಸೇನೆಯ ಮಧ್ಯದಲ್ಲಿ ನಿನ್ನ ಮುಂದುಗಡೆ ಮದದಾನೆಯ ಮೇಲೆ ಆರೂಢನಾಗಿ ಉನ್ನತವಾದ ನೀಲಚ್ಛತ್ರದಿಂದ ವಿರಾಜಿಸುತ್ತಿರುವ ಈ ವಿದ್ಯಾ ಪತಿಯನ್ನು ಕಂಡು 'ಇಕೋ ! ಅರಸೊತ್ತಿಗೆಗೆ ಸಮನಾದ ಗೌರವವನ್ನು ನೀಡುತ್ತಿರುವ ಧರ್ಮ ರಾಜ್ಯವಿದು ; ಇದಕ್ಕೆ ಜಯವಾಗಲಿ' ಎಂದು ವಿದ್ಯಾ ವಂತರು ನಿನ್ನನ್ನು ಶತಶಃ ಸಹಸ್ರಶಃ ಅಭಿನಂದಿಸುತ್ತಿರುವವರು. ಚಕ್ರೇಶ, ಈ ಪರಿಯ ನಿನ್ನ ಅನಂತ ಉಪಕಾರಗಳಿಂದ ಕೃತಜ್ಞನಾದ ಕವಿರಾಜನು ನಿನ್ನನ್ನು ತನ್ನ ಮಹಾ ಕಾವ್ಯವೊಂದಕ್ಕೆ ನಾಯಕನನ್ನಾಗಿ ಇಟ್ಟುಕೊಂಡರೆ ಅಯುಕ್ತವಲ್ಲ. ರಾಜನ್, ಸಂಧ್ಯಾಕಾಲ ಸಮೀಪಿಸುತ್ತಲಿದೆ."

ಈ ಸೂಚನೆಯನ್ನು ತಿಳಿದು ವಿಕ್ರಮಾದಿತ್ಯನು ಮುಂದೆ ಮಾತನ್ನು ಬೆಳಸಲಿಲ್ಲ. ವಿಜ್ಞಾನೇಶ್ವರರ ಅಪ್ಪಣೆಯನ್ನು ಪಡೆದು ತನ್ನ ಅರಮನೆಗೆ ತಿರುಗಿದನು.

---

## ಕಿರಣ ಒಂಭತ್ತು

# ಕೊಂಕಣ ಚಕ್ರವರ್ತಿ

"ಮಾಲೆ, ಬಾಲೆಯರಿಗೆ ಭೂಷಣ ಲಜ್ಜೆ ಎಂಬುದು ಸಟೆಯಲ್ಲ. ಅಲ್ಲಿ ನೋಡು ಆ ಸಂಧ್ಯಾಸುಂದರಿಯ ಕಪೋಲಗಳು ಹೇಗೆ ಅಶಕ್ತವಾಗಿ ಒಪ್ಪು ತ್ತಿವೆ. ಇದರ ಕಾರಣವೇನು, ಬಲ್ಲೆಯಾ ?"

"ಬಲ್ಲೆನಪ್ಪ, ರವಿಕಾಂತನ ಆಗಮನ."

"ಇದೇನು ಇದೀಗ ಹೊಸತಲ್ಲವಾದರೂ ಆಕೆಯ ಆ ಭಾವನೆ ನಿತ್ಯ, ಸಹಜ. ಲೋಕದಲ್ಲಿಯ ಮಿಕ್ಕ ಜ್ಯೋತಿಗಳನ್ನು ಉಳಿದು ಈ ರವಿರಾಜ

ನನ್ನು ವರಿಸಿದ ಈ ಸಂಧ್ಯಾಕುಮಾರಿಯ ಚಾತುರ್ಯವು ನನಗೆ ಮತ್ತೆ ಮತ್ತೆ ಮೆಚ್ಚಿಕೆಯಾಗುತ್ತದೆ.''

''ಅಂದರೆ ಸಂಧ್ಯಾಕುಮಾರಿಯ ತಂದೆ ಆಕಾಶರಾಜನು ಸ್ವಯಂವರ ನೆರೆಯಿಸಿದನೆಂತಲೂ ಅದರಲ್ಲಿ ಈ ಸಂಧ್ಯೆ ತನ್ನ ಪ್ರಿಯನನ್ನು ಆರಿಸಿಕೊಂಡ ಳೆಂತಲೂ ನಮ್ಮ ಅಭಿಪ್ರಾಯವಲ್ಲವೇ, ಅಪ್ಪ ?''

''ಅಹುದು ವತ್ಸೆ, ಕನ್ನೆಯರಿಗೆ ಯೋಗ್ಯ ವರನನ್ನು ದೊರಕಿಸಿಕೊಡಲು ಸ್ವಯಂವರ ಒಂದು ಉಪಾಯ. ಕುಮಾರಿಯರ ಇಂತಹ ಆಯ್ಕೆಗೆ ತಂದೆ ತಾಯಿಗಳು ನೆರವಾಗಬೇಕಲ್ಲದೆ ಬಲವಂತ ಮಾಡತಕ್ಕದ್ದಲ್ಲ.''

ಮರುದಿನ ಸಂಧ್ಯಾಕಾಲ ; ವಿಕ್ರಮಾದಿತ್ಯನು ರಾಜಪುತ್ರಿ ವೈಲಳ ದೇವಿಯೊಡನೆ ಮನೋಹರವಾಗಿ ಸಿಂಗರಿಸಿದ ಭವ್ಯರಥದಲ್ಲಿ ಕುಳಿತು ಊರ ಹೊರಗಿನ ಉದ್ಯಾನದಲ್ಲಿ ವಿನೋದವಾಗಿ ಹೊರಟಿದ್ದನು. ರಥವು ಮೆಲ್ಲ ಮೆಲ್ಲನೆ ಹೋಗುತ್ತಿದ್ದುದರಿಂದ ಅವರಿಗೆ ಪ್ರಕೃತಿಯ ರಮಣೀಯ ದೃಶ್ಯಗಳು ಸೊಗಸಾಗಿ ಕಂಗೊಳಿಸುತ್ತಿದ್ದುವು. ಸೃಷ್ಟಿಶೋಭೆಯ ಮಾಧುರ್ಯವು ಆ ತಂದೆ ಮಕ್ಕಳ ಹೃದಯದಲ್ಲಿ ಹೆಚ್ಚಿನ ಪ್ರಸನ್ನತೆಯನ್ನು ಪ್ರತಿಬಿಂಬಿಸಿ ಅವರನ್ನು ಸವಿಯಾದ ಸ್ನೇಹಸಂಲಾಪಕ್ಕೆ ಅನುಗೊಳಿಸಿತು. ಅವರ ಮಾತು ಗಳು ಅರಿವಿಲ್ಲದಂತೆ ಮುಂದುವರಿದುವು. ತಂದೆ ಆರಂಭಿಸಿದ ವಾದದ ಇನ್ನೊಂದು ಅಂಗವನ್ನು ಮಗಳು ಇಂತು ತೋರಿಸಿಕೊಟ್ಟಳು :

''ಆದರೆ ಅಪ್ಪ, ಪ್ರಣಯದಂತಹ ಸುಕುಮಾರ ವಿಷಯವನ್ನು ಈ ವಿಧವಾಗಿ, ಪೇಟೆಯಲ್ಲಿ ಇಟ್ಟು ಮಾರುವಂತೆ, ಸಾರ್ವಜನಿಕ ಪ್ರದರ್ಶನ ದಲ್ಲಿ ಮಂಡಿಸುವುದು ಎಲ್ಲ ಕುಮಾರಿಯರ ಭಾವನೆಗೆ ಸರಿಯಾಗಲಾರದು. ಇದೀಗ ನೀವು ನಿವೇದಿಸಿದ, ಬಾಲೆಯರಿಗೆ ಸಹಜವೂ ನಿತ್ಯವೂ ಆದ ವಿನ ಯಕ್ಕೆ ಅದು ಬಾಧಕವಲ್ಲವೆ ?''

''ಸ್ವಲ್ಪ ಮಟ್ಟಿಗೆ ಅಹುದು. ಕೆಲಮುಗ್ಧೆಯರು ತಮ್ಮ ಮನದೊಲ ವನ್ನು ತಮ್ಮ ಅತ್ಯಂತ ಅಂತರಂಗದ ಆಪ್ತರಿಗೂ ತೋರಗೊಡರು. ಅಂತಹ ರಿಗೆ ನೀನು ಹೇಳಿದಂತೆ ಈ ಸ್ವಯಂವರವಾದರೂ ಒಂದು ಬಲುಮೆ. ಆದರೆ ಒಂದಿಲ್ಲ ಒಂದು ದಿನ, ಒಂದಿಲ್ಲ ಒಂದು ಪರಿಯಿಂದ ಅವರಾ ಮನದೊಲವು ತಂದೆ ತಾಯಿಯಂತಹ ಆಪ್ತರಿಗಾದರೂ ತಿಳಿಯುವುದು ಉಚಿತವಲ್ಲವೆ ?''

"ಅಹುದು, ಅಪ್ಪ."

"ಮಾಲೆ, ಇದೀಗ ನೀನು ವರ್ಣಿಸಿದ ಕುಮಾರಿಯರ ಗುಂಪಿನಲ್ಲಿ ನಿನ್ನನ್ನು ಸೇರಿಸಿ, ನೀನು ಒಪ್ಪಿಕೊಂಡಂತೆ ನಿನ್ನ ಮನದೊಲವನ್ನು ಅರಿತು ಕೊಳ್ಳುವ ಅಂತಹ ಸಂದರ್ಭವು ಇದೀಗ ಬಂದಿದೆ ಎಂದು ಎಣಿಸಿ ನಿನ್ನ ತಂದೆ ಯಾದವನು ಹಾಗೆ ಪ್ರಯತ್ನಿಸಿದರೆ ಆತನ ಆ ಪ್ರಯತ್ನವು ಹುಸಿಯಾಗ ಲಿಕ್ಕಿಲ್ಲವಷ್ಟೆ ?"

"ಆಗಲಿಕ್ಕಿಲ್ಲ."

"ಮಗುವೇ, ಮನಬಿಚ್ಚಿ ಮಾತಾಡು. ನಿನಗೆ ತಾಯಿಯೆಂದರೂ ನಾನೇ; ತಂದೆಯೆಂದರೂ ನಾನೇ; ಅಲ್ಲವೆ ? ನಿನ್ನ ಜೀವನದಲ್ಲಿಯ ಮಹತ್ತರ ವಾದ ಈ ಸಂನಿವೇಶವನ್ನು ಕುರಿತು ನೀನು ಕೊಂಚವಾದರೂ ಯೋಚಿಸಿರ ಬಹುದಲ್ಲವೇ ?"

"ಯೋಚಿಸಿರುವೆ ?"

"ಏನನ್ನು ಯೋಚಿಸಿರುವೆ ?"

"ಅದನ್ನು ಹೇಗೆ ಹೇಳುವುದಪ್ಪ ? ನೀನಾದರೂ ಯೋಚಿಸಿರ ಬಹುದಲ್ಲವೆ ?"

"ಹುಂ."

"ಮೊದಲು ನಿಮ್ಮ ಯೋಚನೆ ತಿಳಿದರೆ ಒಳ್ಳೆಯದು; ಅಲ್ಲವೆ, ಅಪ್ಪ."

"ಆ ಮೇಲೆ ನಿನ್ನ ಇಂಗಿತವನ್ನು ತಿಳಿಸುವೆಯಾ, ಮಗು ?"

"................"

"ಏಕೆ, ಮಾಲೆ ! ಮೂಕಳಾದೆ ?"

"ಹುಂ, ಅಪ್ಪ. ಅವಶ್ಯವಿದ್ದರೆ."

"ವತ್ಸೆ, ಕೇಳು. ನನ್ನಂತಹ ಸಮ್ರಾಜನಿಗೆ ಸರಿಯಾದ ಬೀಗತನ ವನ್ನು ಕಂಡುಕೊಳ್ಳುವುದು ಕಷ್ಟ. ಮಿಕ್ಕ ಅರಸರು ಕಡಿಮೆಯ ಅಂತಸ್ತಿಗೆ ನಿಲ್ಲುತ್ತಾರೆ. ಆದರೂ ಅವರಲ್ಲಿ ಕುಲ, ಶೀಲ, ವಿದ್ಯೆ, ಪರಾಕ್ರಮ, ಮಹತ್ವಾ ಕಾಂಕ್ಷೆ ಮುಂತಾದ ಗುಣಗಳಿಂದ ಶ್ರೇಷ್ಠನಾದವನು ಆರಿಸಲಿಕ್ಕೆ ಯೋಗ್ಯನು."

"ಅಪ್ಪ, ಕ್ಷಾತ್ರತೇಜಸ್ಸಿನಿಂದ ಯುಕ್ತರಾದ ಕ್ಷತ್ರಿಯರೆಲ್ಲರು ಸಮಾನರೇ. ದೈವಬಲದ ಮೂಲಕ ಅವರಲ್ಲಿ ಒಬ್ಬನು ಚಕ್ರಾಧಿಪತಿಯ ಹೊಟ್ಟೆಯಲ್ಲಿ

ಹುಟ್ಟಿರಬಹುದು ; ಇನ್ನೊಬ್ಬನು ಮಂಡಲೇಶ್ವರನಿಗೆ ಮಗನಾಗಿರಬಹುದು.''

''ನಿಜ ವತ್ಸೆ ; ಆದರೆ ಲೋಕದಲ್ಲಿ ಪದವಿ ಎಂಬುದು ಗಣ್ಯವಾದ ವಸ್ತು. ಮಂಡಲೇಶ್ವರನ ಮಗನಾಗಿದ್ದರೂ ಕ್ಷತ್ರಿಯವೀರನ ತೇಜೋ ವಿಶೇಷದಿಂದ ವಿರಾಜಿಸುತ್ತಿದ್ದರೆ ಅತನು ಮಾನ್ಯನೇ, ಪಾತ್ರನೇ, ಇಂತಹ ತೇಜಸ್ವಿಯಾದ ರಾಜಪುತ್ರನೊಬ್ಬನು ನನ್ನ ಬಗೆಯನ್ನು ಬಹುವಾಗಿ ಸೆಳೆದಿರುವನು.''

ತನ್ನ ಮಾತಿನಿಂದ ವೈಲಳದೇವಿಯ ಎದೆಯಲ್ಲಿ ಯಾವ ವಿಧದ ಭಾವನೆಗಳು ಮೂಡುವುವು ಎಂಬುದನ್ನು ಸೂಕ್ಷ್ಮವಾಗಿ ಕಂಡು ಹಿಡಿಯಲು ವಿಕ್ರಮಾದಿತ್ಯನು ಮೆಲ್ಲ ಮೆಲ್ಲನೆ ಮಾತಿನ ಕಾಳುಗಳನ್ನು ಚೆಲ್ಲುತ್ತ ಅವಳ ಮುಖಮುದ್ರೆಯನ್ನು ಪರೀಕ್ಷಿಸಲಾರಂಭಿಸಿದನು. ಅವಳ ಎದೆವಕ್ಕಿ ತನ್ನ ಕಣ್ಣು ತಪ್ಪಿಸಿ ಎಲ್ಲಿ ಹಾರಿ ಹೋಗುವುದೋ ಎಂದು ತವಕಪಡುತ್ತ ಬಹು ಜಾಗರೂಕತೆಯಿಂದ ಮಾತಿನ ಒಂದೊಂದು ಮೆಲ್ಲಡಿಯನ್ನು ಊರತೊಡಗಿದನು. ಮೊದಲಿನ ಈ ಪ್ರಸ್ತಾವನೆಯ ವಾಕ್ಯದಿಂದ ಆಕೆಯ ಮನಸ್ಸಿನ ಮೇಲೆ ಯಾವ ಭಾವನೆಯೂ ಮೂಡಿದಂತೆ ಕಾಣಲಿಲ್ಲ. ಸುಮ್ಮನೆ ಕತೆ ಕೇಳುವಂತೆ ''ಹೂಂ'' ಎಂದು ಆಕೆ ಉಸುರಿದಳು.

''ಆತನು ಪಡುವಣ ನಾಡಿನಲ್ಲಿ ನೆಲಸಿರುವನು.''

ಈ ವಾಕ್ಯದಿಂದ ಆಕೆಯ ಮೊಗದ ಮೇಲೆ ಅಸಡ್ಡೆಯ ಲಹರಿ ಏಳಲಿಲ್ಲ, ಇಷ್ಟೆ ಅಲ್ಲ, ಸಮಾಧಾನದ ಅಸ್ಪಷ್ಟವಾದ ಒಂದು ರೇಖೆ ಅಲ್ಲಿ ಸುಳಿದಂತೆ ಆತನಿಗೆ ಭಾಸವಾಯಿತು. ಆತನು ಸ್ವಲ್ಪ ಧೈರ್ಯದಿಂದ ಇನ್ನೊಂದು ಹೆಜ್ಜೆ ಇಕ್ಕಿದನು."

''ಆತನ ಕುಲವೋ ಉಚ್ಚವಾದುದು ; ಆಕೃತಿಯೋ ಚಿತ್ತಾಕರ್ಷಕವಾದುದು.''

''ಹುಂ.''

ಈ ವಿಷಯವು ಖಂಡಿತವಾಗಿ ತನಗೆ ಅಪ್ರಿಯವಲ್ಲ ಎಂಬ ಸ್ಪಷ್ಟವಾದ ಸೂಚನೆಯನ್ನು ಆಕೆಯ ಈ ಒಂದು ಅಕ್ಷರದ ಉಚ್ಚಾರಣೆಯಲ್ಲಿ ಆತನು ಕಂಡುಹಿಡಿದು ಮುಂದೆ ಸಾಗಿದನು:

"ಆತನು ಸಾಹಸಿಯೂ ಹೆಚ್ಚಿನ ಮಹತ್ವಾಕಾಂಕ್ಷಿಯೂ ಆಗಿರುವನು. ಹಿರಿಯರಿಂದ ತನಗೆ ಬಂದ ರಾಜ್ಯವನ್ನು ಭದ್ರವಾಗಿ ಕಾಯ್ದು ಕೊಳ್ಳುವುದಲ್ಲದೆ ಅದನ್ನು ಬಹುವಾಗಿ ವಿಸ್ತರಿಸಿಕೊಂಡಿರುವನು. ತನ್ನ ನೆರೆಯ ಮಹಾ ಮಂಡಲೇಶ್ವರನನ್ನು ಪ್ರತಿಭಟಿಸಿ ಸಹ್ಯಾದ್ರಿಯ ಪಶ್ಚಿಮದ ಕರಾವಳಿಯ ಒಡೆತನವು ತನ್ನದಾಗಬೇಕು ಎಂದು ಹವಣಿಸುತ್ತಿರುವನು."

"ಹುಂ."

"ತನಗೆ ಇನ್ನೊಬ್ಬರ ಅಧೀನತ್ವ ಬೇಡ. ತಾನು ಸ್ವತಂತ್ರ ನರಪತಿ, ಪಶ್ಚಿಮ ಸಮುದ್ರಾಧಿಪತಿ ಎನಿಸಿ ಮೆರೆಯಬೇಕು ಎಂಬುದು ಆತನ ಎಣಿಕೆ."

"ಹುಂ."

"ಈ ತನ್ನ ಹಾರಯಿಕೆಗಳೆಲ್ಲ ಕೈಗೂಡಿ ಬರುವುವು ಎಂಬ ಭವಿಷ್ಯತ್ತಿನ ಮುಂಗಾಣ್ಕೆಯೋ ಎಂಬಂತೆ 'ಕೊಂಕಣಚಕ್ರವರ್ತಿ' ಎಂಬ ಗೌರವದ ಬಿರುದನ್ನು ಈಗಾಗಲೇ ಧರಿಸಿಕೊಂಡಿರುವನು."

ಈವರೆಗಿನ ಒಂದೊಂದು ಶಬ್ದದಿಂದ ರಾಜನಂದಿನಿಯ ಮುಖಮಂಡಲದಲ್ಲಿ ಎದೆವಕ್ಕಿ ಹೆಚ್ಚೆಚ್ಚು ಸಂತೋಷವಾಗಿ ಸುಳಿದಾಡುತ್ತಿರುವ ಸಂಕೇತವನ್ನು ವಿಕ್ರಮಾದಿತ್ಯನು ಗುರುತಿಸಿದನು. ಆತನು ಹೆಚ್ಚಿನ ಆತ್ಮವಿಶ್ವಾಸದಿಂದಲೂ ಕಾರ್ಯಸಿದ್ಧಿಯ ಆಸೆಯಿಂದಲೂ ನೇರವಾಗಿ ಮುಂದಕ್ಕೆ ನಡೆದನು.

"ಈಗ ಸ್ವಲ್ಪ ದಿನಗಳ ಹಿಂದೆ ಆತನು ಕುಂತಲದ ಚಕ್ರಾಧಿಪತಿಯನ್ನು ವಿರೋಧಿಸಿ ಚಾಲುಕ್ಯ ಸಾಮ್ರಾಜ್ಯ ಶಕ್ತಿಯನ್ನು ಪ್ರತಿಭಟಿಸಿದನು."

ವಿಷಯವು ಹೆಚ್ಚು ಸ್ಪಷ್ಟವೂ ನಿಃಸಂದಿಗ್ಧವೂ ಆದಂತೆ ರಾಜಕುಮಾರಿಯ ಬಗೆಯಲ್ಲಿ ಯಾವುದೋ ಒಂದು ವಸ್ತುವು ಫಕ್ಕನೆ ಪ್ರವೇಶ ಮಾಡಿ ಗಟ್ಟಿಯಾಗಿ ಅವಚಿಕೊಂಡಂತೆ ಸಂವೇದನೆ ಉಂಟಾಯಿತು. ಇಂದಿನವರೆಗೆ ಇಂತಹ ಯಾವುದೇ ವಿಧದ ಸಂಪರ್ಕಕ್ಕೆ ಅಪರಿಚಿತವಾಗಿದ್ದ ಆಕೆಯ ಅಂತರಾಳವು ಕದಡಿತು. ಹಿಂದೆ ಎಂದೂ ಅನುಭವಿಸದ, ಅಪೂರ್ವ, ಅನಿರ್ವಚನೀಯವಾದ ಒಂದು ಭಾವನೆ ಎದ್ದು ಆಕೆಯ ಹೃದಯದಲ್ಲಿ ಹುಯ್ಲನ್ನು ಎಬ್ಬಿಸಿತು. ಈ ಭಾವನೆ ಉಕ್ಕಿ ಹೊರಚೆಲ್ಲುವ ಭೀತಿಯಿಂದ ಆಕೆ ತುಟಿ

ಗಳನ್ನು ಬಿಗಿಯಾಗಿ ಮುಚ್ಚಿಕೊಂಡಳು. ಆಕೆಯ ಮುಖದ ಮೇಲಿನ ಕಾಂತಿ ಹೆಚ್ಚಿತು. ಈ ಸಂವಿಧಾನವನ್ನು ವಿಕ್ರಮಾದಿತ್ಯನು ಲಕ್ಷಿಸಿದನು. ತನ್ನ ಮಾತಿಗೆ ಆಕೆ 'ಹುಂ'ಗುಡುತ್ತ ಇಲ್ಲ ಎಂಬುದನ್ನು ಗಮನಿಸದೆ ಅಧಿಕವಾದ ಆಸಕ್ತಿಯಿಂದ ತನ್ನ ಭಾಷಣವನ್ನು ಕೊನೆಗೊಳಿಸಲು ಮುಂದೂಡಿದನು.

"ಆತನು ಕಾದಂಬಕುಲತಿಲಕನು, ಗೋವಾ ಪುರವರಾಧೀಶನು, ಹಲಸಿಗೆ ಮೊದಲಾದ ನಾಡುಗಳ ನಾಯಕನು."

"................"

"ಗೂಹಲ್ಲದೇವನ ಮೊಮ್ಮಗನು, ವಿಜಯಾದಿತ್ಯದೇವನ ಮಗನು, ಜಯಕೇಸಿ ಎಂಬ ಸುಂದರ ಹೆಸರಿನಿಂದ ಸುವಿಶ್ರುತನು."

"................"

ಈ ಹೆಸರನ್ನು ಕೇಳಿದೊಡನೆ ಕುಮಾರಿಯ ಕಣ್ಣುಗಳಲ್ಲಿ ನಲಿವಿನ ಮಿಂಚು ಹೊಳೆಯಿತು. ಆ ಹೊಳೆಪು ಆಕೆಯ ಮುಖಕಾಂತಿಗೆ ಮೆರಗು ವಿಟ್ಟಿತು.

ವಿಕ್ರಮಾದಿತ್ಯನು ಕೃತಕೃತ್ಯನಾದನು. ಸಂತೋಷದ ಒಂದು ನಿಟ್ಟುಸುರು ಆತನ ಮುಖದಿಂದ ಹೊರಬಿದ್ದಿತು. ಈ ವಿಷಯವನ್ನು ಕೂಲಂಕಷವಾಗಿ ಪರಿಶೋಧಿಸಿ ತೀರ್ಮಾನಕ್ಕೆ ಬರುವುದಾಗಿ ಆತನು ನಿರ್ಧರಿಸಿದನು.

ಕೆಲನಿಮಿಷ ಮೌನವಾಗಿ ಕಳೆದುವು. ಈ ಹೊತ್ತಿಗೆ ರಥವು ಒಂದು ಕೊಳದ ಪಕ್ಕದಲ್ಲಿ ಬಂದಿತು. ಅಲ್ಲಿಯ ಬನಸಿರಿ ಅತಿಮೋಹಕವಾಗಿದ್ದಿತು. ಸಂಧ್ಯಾಪ್ರಕಾಶದಿಂದ ರಂಜಿತವಾದ ಕೊಳದ ಕೆನ್ನೀರಿನಲ್ಲಿ ಹೊಂಬಣ್ಣದ ಅರಸಂಚೆಗಳು ಜತೆಗೂಡಿ ಜಲಕ್ರೀಡೆ ಮಾಡುತ್ತಿದ್ದುವು. ಅದನ್ನು ನೋಡುತ್ತ ಇಬ್ಬರೂ ತಲ್ಲೀನರಾದರು. ಹೀಗೆ ಆಕೆ ಮೈಮರೆತಿರುವುದನ್ನು ಅರಿಸಿ ವಿಕ್ರಮಾದಿತ್ಯನು ಮೆಲ್ಲನೆ ಪ್ರಶ್ನಿಸಿದನು: "ವತ್ಸೆ, ಆತನನ್ನು ನೋಡಿರುವೆಯಾ?"

"ಹೂಂ."

"ಎಲ್ಲಿ ಮಗು?"

"................"

"ಎಲ್ಲಿ ಮಗೂ, ಹೇಳೇ?"

"ಎರಡು ವರುಷಗಳ ಹಿಂದೆ ಹೀಗೆಯೇ ವಸಂತಕಾಲವಿತ್ತು. ನೀವು ನನ್ನನ್ನು ಜೊತೆಗೆ ಕರೆದುಕೊಂಡು ತೆಂಕಣನಾಡಿನಲ್ಲಿ ಸುಖ ಸಂಚಾರ ಮಾಡುತ್ತಿದ್ದಿರಿ. ಕೆಲದಿನ ಬನವಾಸಿಯಲ್ಲಿ ತಂಗಿದ್ದಿರಿ. ಒಂದು ದಿವಸ ಸಾಯಂಕಾಲ ನಾನು ನನ್ನ ಸೇವಿಕೆಯರೊಂದಿಗೆ ಶ್ರೀಮಧುಕೇಶ್ವರನ ದರ್ಶನಕ್ಕೆ ಹೋಗಿದ್ದೆನು. ದರ್ಶನ ಸೇವೆಯನ್ನು ಮುಗಿಸಿಕೊಂಡು ದೇವಾಲಯದ ಹೊರಗಡೆ ನಡೆದುಬಂದಿತು. ಅಷ್ಟರಲ್ಲಿ—"

"ಅಷ್ಟರಲ್ಲಿ ಏನು, ವತ್ಸೆ ?"

"ಅದೇ ಹೊತ್ತಿಗೆ ಭವ್ಯವಾದ ಮದದಾನೆಯೊಂದು ಮಹಾ ದ್ವಾರದ ಮುಂದೆ ಬಂದು ನಿಂತಿತು. ಆದರ ಮೇಲಿನ ಬೆಡಗಿನ ಅಂಬಾರಿಯೊಳಗಿಂದ ತೇಜಸ್ವಿ ತರುಣನೊಬ್ಬನು ಕೆಳಗೆ ಇಳಿದನು. ಆತನ ಜೊತೆಯಲ್ಲಿ ಹನ್ನೆರಡು ಕುದುರೆಗಳನ್ನೇರಿ ರಾಹುತರು ಬಂದಿದ್ದರು. ಅವರೆಲ್ಲರು ದೇವಾಲಯದ ಒಳಗೆ ಹೋದರು. ನಾನು ಪಲ್ಲಕ್ಕಿಯಲ್ಲಿ ಕುಳಿತು ಶಿಬಿರದ ಕಡೆಗೆ ತಿರುಗಿದೆನು. ಮಾರ್ಗದಲ್ಲಿ ವಿಚಾರಿಸಲು ಆ ತೇಜಸ್ವಿ ತರುಣನು ಇದೀಗ ನೀವು ವರ್ಣಿಸಿದ ರಾಜಕುಮಾರನು ಎಂಬ ಸಂಗತಿ ತಿಳಿಯಬಂದಿತು. ಅಂದಿನಿಂದ—" ಮುಂದಕ್ಕೆ ಮಾತನಾಡಲಾರದೆ ಕುತ್ತುಸಿರು ಬಿಡಲಾರಂಭಿಸಿದಳು.

"..............."

"ಹೇಳು ಮಗು, ಅಂದಿನಿಂದ ಏನು ?"

"ಏನೂ ಇಲ್ಲವಪ್ಪ." ಬಹುಕಷ್ಟದಿಂದ ಬೇಸರಗೊಂಡಂತೆ ನುಡಿದಳು.

"ವತ್ಸೆ, ಅಹುದು. ಅಂದು ಜಯಕೇಸಿ ಶಿಬಿರಕ್ಕೆ ಬಂದು ನನ್ನನ್ನು ಕಂಡು ಹೋದನು. ಶ್ರೀಮಧುಕೇಶ್ವರನು ಕಾದಂಬರ ಪ್ರಾಚೀನ ಕುಲದೈವತವೆಂದೂ ಅತನ ಸಂದರ್ಶನಕ್ಕೆ ತಾನು ಬಂದಿರುವುದಾಗಿಯೂ ನನಗೆ ಹೇಳಿದನು. ಆಗ ನಾನು ಕೆಲ ರಾಜಕೀಯ ವಿಚಾರಗಳನ್ನು ಪ್ರಸ್ತಾಪಿಸಿದೆನು. ಬನವಾಸಿ ಪಟ್ಟಣವು ಹಾನಗಲ್ಲ ಕಾದಂಬ ಮಹಾಮಂಡಲೇಶ್ವರರ ಅಧಿಕಾರದಲ್ಲಿ ಇದ್ದಿದ್ದರೂ ಸದ್ಯ ಅವರಿಗೂ ತನಗೂ ವಿರೋಧವಿಲ್ಲೆಂತಲೂ, ಅವರ ರಾಜ್ಯದಲ್ಲಿಯ ಪೂರ್ವ ಸಂಮತಿಯನ್ನು ಪಡೆದು ತಾನು ಅವರ ರಾಜ್ಯದಲ್ಲಿಯ ಈ ಪವಿತ್ರಕ್ಷೇತ್ರಕ್ಕೆ ಆಗಮಿಸಿರುವುದಾಗಿಯೂ ವಿವರಿಸಿದನು. ಆದರೆ ಜಯ

ಕೇಸಿಯನ್ನು ನಾನು ಇದಕ್ಕೂ ಮೊದಲಿನಿಂದಲೂ ಕಂಡು ಬಲ್ಲೆನು. ಬಹು ಧೈರ್ಯಶಾಲಿ, ವಿನೀತ, ರಾಜನೀತಿಕುಶಲ! "

"................"

"ಮಾಲೆ, ಆ ಮೇಲೆ ನೀನು ಆತನ ವಿಷಯವಾಗಿ ಅನೇಕ ಸಮಾಚಾರಗಳನ್ನು ತಿಳಿದುಕೊಂಡಿರಬಹುದು. ಆತನ ಬಗೆಗೆ ನನಗೆ ಯಾವಾಗಲೂ ಹೆಚ್ಚಿನ ಅಭಿಮಾನವಿದೆ. ಆತನ ಗುಣ, ರೂಪ, ಕುಲ, ಶೀಲಗಳು ನಿನ್ನ ಮನಸ್ಸಿಗೆ ಹಿಡಿದಿರುವವಷ್ಟೆ ? "

"................"

"ಮಗು, ಆತನು ನಿನ್ನ ಜೀವನದ ಜೊತೆಗಾರನಾಗುವ ಸಂದರ್ಭ ಬಂದರೆ ನಿನಗೆ ಇಷ್ಟವಷ್ಟೆ ? "

"................"

"ಮೌನಂ ಸಂಮತಿಸೂಚಕಂ."

ಕೆಲ ನಿಮಿಷ ಒಬ್ಬರೂ ಮಾತನಾಡಲಿಲ್ಲ. ರಥವು ಇನ್ನೂ ಕೆಲ ಅಡಿ ಕೊಳದ ಸುತ್ತು ನಡೆದು ಹೋಯಿತು. ವಿಕ್ರಮಾದಿತ್ಯನ ಉದ್ದೇಶವು ಸಫಲವಾಯಿತು. ಮುಂದಿನ ಸಂಕಲ್ಪದ ರೂಪರೇಷೆಗಳು ಆತನ ಮನಸ್ಸಿನಲ್ಲಿ ಮೂಡಿದುವು. ಅಂದು ಹೊರಟ ಕಾರ್ಯವು ಪೂರ್ಣವಾದುದರಿಂದ ವಿಕ್ರಮಾದಿತ್ಯನು ಮುಗಿತಾಯನ್ನು ಸೂಚಿಸುತ್ತ ನುಡಿದನು: "ವತ್ಸೆ, ಊರಿಂದ ಸಾಕಷ್ಟು ದೂರ ಬಂದಿದ್ದೇವೆ, ಅಲ್ಲವೆ ? ಇಂದಿನ ಸಂಧ್ಯಾವಿಹಾರವನ್ನು ಇಲ್ಲಿಗೆ ಸಮಾಪ್ತಗೊಳಿಸುವ. ಇರುಳ ನೆಳಲು ಬರುತ್ತಲಿದೆ. ಅಕೋ ನೋಡಿದೆಯಾ ಬಾನಿನಲ್ಲಿ! ಪಕ್ಷಿಗಳು ಹೇಗೆ ಜತೆಯನ್ನು ಕರೆದುಕೊಂಡು ಜೋಡುಜೋಡಾಗಿ ಗೂಡಿನತ್ತ ಓಡುತ್ತಲಿವೆ. ನಡೆ, ನಾವೂ ನಮ್ಮ ಬೀಡಿಗೆ ಹೊರಡುವ."

* * * *

ಮರುದಿನ ಮುಂಜಾವದಲ್ಲಿ ಜಯಕೇಸಿಯನ್ನು ಸಂಬೋಧಿಸಿ ವಿಕ್ರಮಾದಿತ್ಯನು ಸ್ವಹಸ್ತದಿಂದ ಬರೆದ, ಪಾಣಿಗ್ರಹಣದ ಸೂಚನೆಯನ್ನು ಒಳಗೊಂಡ ಓಲೆಯನ್ನು ಎತ್ತಿಕೊಂಡು ಬೇಹುಗಾರನು ಕಲ್ಯಾಣ ನಗರಿಯಿಂದ ಗೋವಾಪುರಿಯತ್ತ ಲಗುಬಗೆಯಿಂದ ಹೊರಟು ಹೋದನು.

## ಕಿರಣ ಹತ್ತು

# ಗೆಲುವಿನ ಹಬ್ಬ

ಒಂದು ಹೋಗಿ ಎರಡಾಯಿತು. ಎರಡರಿಂದ ಮೂರರ ಮನೆಗೆ ಬಂದು, ನಾಲ್ಕರ ಕೋಟೆಯನ್ನು ದಾಟಿ, ಐದರಗಡಿಗೆ ಕಾಲೂರಿ ನಿಂತು ಕೊಂಡಿತು. ವಿಜ್ಞಾನೇಶ್ವರರ ಮಠದಲ್ಲಿ ಪುರಪ್ರಮುಖ ಮತ್ತು ಮಂತ್ರಿ ಪ್ರಧಾನರ ಆಲೋಚನಾ ಸಭೆಯನ್ನು ವಿಕ್ರಮಾದಿತ್ಯನು ಕರೆಸಿದ್ದನು: ಮಹಾ ಮಂಡಲೇಶ್ವರ ಆಚರಸನು ಏಕನಿಷ್ಠೆಯಿಂದ ಇದುವರೆಗೆ ನಡೆಸಿದ ಸಾಮ್ರಾಜ್ಯ ಸೇವೆ ಮತ್ತು ಇದೀಗ ಸಂಪಾದಿಸಿದ ಅಪೂರ್ವ ಸಾಹಸದ ವಿಜಯ ಇವುಗಳಿ ಗೋಸುಗ ಆತನನ್ನು ಮತ್ತು ಸಾಮ್ರಾಜ್ಯದ ಇತರ ವೀರರನ್ನು ಗೌರವಿಸುವ ಉದ್ದೇಶದಿಂದ ಒಂದು ವಿಜಯೋತ್ಸವವನ್ನು ಆಚರಿಸಬೇಕು ಎಂಬುದು ವಿಕ್ರ ಮಾದಿತ್ಯನ ಮೂಲ ಸಂಕಲ್ಪ. ಅದೇ ಸಮಯಕ್ಕೆ ವಿಜ್ಞಾನೇಶ್ವರರು ರಚಿಸು ತ್ತಿರುವ 'ಮಿತಾಕ್ಷರಾ' ಗ್ರಂಥವು ಸಮಾಪ್ತಿಯೈದಿತು. ವಿದ್ಯಾಪತಿ ಬಿಹ್ಲಣನು 'ವಿಕ್ರಮಾಂಕದೇವ ಚರಿತಂ' ಎಂಬ ಸರಸ ಸಂಸ್ಕೃತ ಕಾವ್ಯವನ್ನು ಬರೆದು ಮುಗಿಸಿರುವನು; ಅದರ ಪ್ರಕಾಶನವನ್ನು ಉಚಿತ ಸಮಾರಂಭದಿಂದ ನೆರ ವೇರಿಸಿ ಆ ವಿದ್ವದ್ವರನನ್ನು ಸತ್ಕರಿಸುವುದು ಯುಕ್ತ ಎಂಬ ಸೂಚನೆ ಮುಂದೆ ಬಂದಿತು. ವಿಕ್ರಮಾದಿತ್ಯನು ಪಟ್ಟವೇರಿದ ದಿನದ ವರ್ಧಂತಿ ಉತ್ಸವವು ಪ್ರತಿವರ್ಷ ನಡೆಯುತ್ತಿದ್ದಿತು. ಅದು ಈ ವರ್ಷ ಬಿಟ್ಟಿದೇವನ ಗಲಭೆಯ ಮೂಲಕ ನಡೆದಿರಲಿಲ್ಲ. ಈ ಉತ್ಸವವನ್ನೂ ಮೇಲಿನವುಗಳ ಜೊತೆಯಲ್ಲಿ ಆಚರಿಸುವುದು ಮೇಲು ಎಂದು ವಿಕ್ರಮಾದಿತ್ಯನ ಮಂತ್ರಿಗಳು ವಾದಿಸಿದರು. ಈಚೀಚೆಗೆ ಯುದ್ಧದಿಂದ ಒದಗುವ ಮನುಷ್ಯ ಸಂಹಾರ ಮೊದಲಾದ ಅನರ್ಥ ಗಳಿಗೆ ಹೇಸಿದ ವಿಕ್ರಮಾದಿತ್ಯನು ಜೀವನದಲ್ಲಿ ಸಮರವು ಬೇಡ, ಶಾಂತಿಬೇಕು, ಎಂದು ಬಹುವಾಗಿ ಹಂಬಲಿಸುತ್ತಿದ್ದನು. ಆತನ ಈ ಅಭಿಲಾಷೆ ಇದುವರೆ ಗಿನ ಕಥಾಸಂದರ್ಭದಲ್ಲಿ ನಿವೇದಿತವಾದಂತೆ ವಿಚಿತ್ರಘಟನೆಗಳ ಆಕಸ್ಮಿತ ಸಂಭವದಿಂದ ಕೆಲಮಟ್ಟಿಗೆ ಪೂರ್ಣವಾದುದರಿಂದ ವಿಜಯೋತ್ಸವದ ನೆರೆ ಯಲ್ಲಿ ಶಾಂತಿಯ ಸಮಾರಂಭವನ್ನೂ ಸೇರಿಸಬೇಕು ಎಂದು ವಿಕ್ರಮಾದಿತ್ಯನು ಪ್ರತಿಪಾದಿಸಿದನು.

ಅಂತೂ ಇದೆಲ್ಲವು ಸೇರಿ ಒಂದೊಂದು ದಿನ ಉತ್ಸವವು ಮೊತ್ತದಲ್ಲಿ ಐದುದಿನಗಳವರೆಗೆ ಅನೂಚಾನವಾಗಿ ನಡೆಯತಕ್ಕುದು ; ಅದರ ಹೆಸರು 'ಗೆಲುವಿನ ಹಬ್ಬ' ಎಂದು ಇರತಕ್ಕುದು ; ಎಂಬುದಾಗಿ ತೀರ್ಮಾನವಾಯಿತು. ಉತ್ಸವದ ದಿನಗಳು, ಆ ದಿನಗಳ ವಿಶಿಷ್ಟ ಕಾರ್ಯಕ್ರಮಗಳು, ಅವುಗಳನ್ನು ಸರಾಗವಾಗಿ ನಡೆಸತಕ್ಕ ವ್ಯವಸ್ಥಾಮಂಡಲಿ, ಮುಂತಾದ ವಿವರಗಳು ಆ ಸಭೆಯಲ್ಲಿ ನಿರ್ಧರಿಸಿಲಾದವು.

ಈ ಸಮಾರಂಭಗಳ ಸಿದ್ಧತೆ ಸ್ವಲ್ಪಕಾಲದಲ್ಲಿ ನೆರವೇರಿತು. ಸಾಮ್ರಾಜ್ಯದ ನಾನಾ ಭಾಗದ ಸಾಮಂತ, ಮಹಾಮಂಡಲೇಶ್ವರ, ದಂಡನಾಯಕ, ಇತರ ಅಧಿಕಾರಿಗಳು, ಪ್ರಜಾಸಂಘಗಳ ಚಾಲಕರು, ಪುರಪ್ರಮುಖರು ಧರ್ಮಾಧಿಕಾರಿಗಳು, ಮಠಾಚಾರ್ಯರು ಮುಂತಾದವರಿಗೆ ಅವುತಣಗಳನ್ನು ಕಳಸಿದರು. ಇವರಲ್ಲಿ ಅನೇಕರು ಅನುಕೂಲ ಕಲ್ಪಿಸಿಕೊಂಡು ಉತ್ಸವಕ್ಕಾಗಿ ರಾಜಧಾನಿಗೆ ಬಂದರು. ಉತ್ಸವದ ನಿಮಿತ್ತ ರಾಜಧಾನಿಯನ್ನು ಬಗೆ ಬಗೆಯಾಗಿ ಅಲಂಕರಿಸಿದರು. ವಿಧವಿಧದ ಚಮತ್ಕಾರಿಕ ರಚನೆಗಳಿಂದಲೂ ಆ ಸಮಾರಂಭದ ಸ್ವರೂಪಕ್ಕೆ ಅನುರೂಪವಾದ ಆಕೃತಿ ವಿಶೇಷಗಳಿಂದಲೂ ಒಪ್ಪುವ ಐದು ಅತಿಭವ್ಯ ಮಂಟಪಗಳನ್ನು ಊರಹೊರಗಿನ ವಿಸ್ತಾರವಾದ ಬಯಲಿನಲ್ಲಿ ನಿಲ್ಲಿಸಿದರು. ವಿಕ್ರಮಾದಿತ್ಯನ ಸುರಾಜ್ಯದಲ್ಲಿ ಇದ್ದುಕೊಂಡು ಅನೇಕ ಹಿತಗಳನ್ನು ಉಪಭೋಗಿಸುತ್ತಿದ್ದ ಪ್ರಜಾಜನಗಳು ಸ್ವಸಂತೋಷಪೂರ್ವಕ ಉತ್ಸಾಹದಿಂದ ಈ ಸಮಾರಂಭಗಳಲ್ಲಿ ಭಾಗಿಯಾಗಲಣಿಯಾದರು. ಆಚರಸನ ಗೌರವವು ಈ ಉತ್ಸವದಲ್ಲಿಯ ಒಂದು ಪ್ರಧಾನ ಸಂನಿವೇಶವಾಗಿದ್ದುದರಿಂದ ತಮ್ಮ ದೊರೆಯ ಈ ವೈಭವವನ್ನು ಕಣ್ಣಾರೆ ಕಂಡು ತಣಿಯಲು ಆತನ ರಾಜ್ಯದ ಎರಂಬರಗೆ, ಕುಕ್ಕನೂರು, ನರೆಯಂಗಲ್ ಮೊದಲಾದ ಊರುಗಳಿಂದ ಅನೇಕ ಜನರು ಕಲ್ಯಾಣ ರಾಜಧಾನಿಗೆ ಬಂದರು.

ಕುಂತಲರಾಷ್ಟ್ರದ ವೀರರು ಸಾಮ್ರಾಜ್ಯದ್ರೋಹಿಗಳ ಮೇಲೆ ಸಂಪಾದಿಸಿದ ವಿಜಯವನ್ನು ಅಭಿನಂದಿಸುವುದು ಮೊದಲನೆಯ ದಿನದ ಕಾರ್ಯಕ್ರಮ. ಈ ಸಮಾರಂಭದಲ್ಲಿ ಕುಂತಲಾಧಿಪತಿ ವಿಕ್ರಮಾದಿತ್ಯನು ಸ್ವತಃ ಅಧ್ಯಕ್ಷತೆಯನ್ನು ವಹಿಸಿದ್ದನು. ಸಾಮ್ರಾಜ್ಯದ ಮಹಾದಂಡನಾಯಕನಾದ ಮಹಾಮಂಡಲೇಶ್ವರ ಆಚರಸನನ್ನು ಸನ್ಮಾನಿಸುವುದು ಈ ಸಮಾರಂಭದ ಒಂದು

ಮುಖ್ಯ ಭಾಗವಾಗಿದ್ದಿತು. ವಿಕ್ರಮಾದಿತ್ಯನ ಪಕ್ಕದಲ್ಲಿ ತನಗಾಗಿ ಮಂಡಿಸಿದ ಉನ್ನತವಾದ ಆಸನದಮೇಲೆ ಆಚರಸನು ಅಲಂಕೃತನಾಗಿದ್ದನು. ಕುಂತಲದ ಯೋಧರು ಬಿಟ್ಟಿದೇವ, ಪಾಂಡ್ಯ ಮೊದಲಾದ ಪುಂಡುಗಾರರ ದಂಡುಗಳ ಮೇಲೆ ನಡೆಸಿದ ಜೈತ್ರಯಾತ್ರೆಯ ವೃತ್ತಾಂತವನ್ನು, ಸಾಮ್ರಾಜ್ಯದ ಸೈನಿಕರ ಕಾರ್ಯಸಾಹಸದ ಚರಿತ್ರೆಯನ್ನು ಪಡೆವಳ ಏಚಿಮಯ್ಯ ನಾಯಕನು ಆಮೂಲಾಗ್ರವಾಗಿ ಸಭಿಕರ ಮುಂದೆ ನಿವೇದಿಸಿದನು. ವಿಶೇಷವಾಗಿ, ಪಶ್ಚಿಮ ಘಟ್ಟವನ್ನು ಇಳಿದು ಕಾದಂಬ ರಾಜ್ಯದಲ್ಲಿ ನುಗ್ಗಿ ಗೋವೆಯನ್ನು ಸೂರೆಗೊಂಡ ಸಾಮ್ರಾಜ್ಯದ ಕಡುಗಲಿಗಳ ಪರಾಕ್ರಮದ ಕತೆಯನ್ನು ಕೇಳು ತ್ತಿರುವಾಗ ಶ್ರೋತೃಗಳ ಮೈನವಿರುಗಳು ಎದ್ದು ನಿಂತುವು. ಇದರ ಬಳಿಕ ಈ ದಂಡಯಾತ್ರೆಯಲ್ಲಿ ಹೆಚ್ಚಿನ ಕಾರ್ಯ ಸಾಹಸಗಳನ್ನು ಮೆರೆಸಿದ ಬಲ್ಲಾಳು ಗಳಿಗೆ ಬಿರುದು, ಬಹುಮಾನ, ಅಧಿಕಾರ, ವೃತ್ತಿ ಮುಂತಾದ ಮೆಚ್ಚುಗಳನ್ನು ನೀಡುವ ವಿಧಾನ ನಡೆಯಿತು. ಇಂತಹವರಲ್ಲಿ ಇಳಿವಯಸ್ಸಿನ ಒಬ್ಬ ದಲ ಪತಿಗೆ ನೆಲದುಂಬಳಿಯನ್ನು ದಯಪಾಲಿಸಿದ ಕಡಿತವನ್ನೂ ಅಲಂಕಾರ ವಸ್ತ್ರ ಗಳನ್ನೂ ಸ್ವಹಸ್ತದಿಂದ ವಿಕ್ರಮಾದಿತ್ಯನು ಸಲ್ಲಿಸುವಾಗ ಕರತಾಡನ ಧ್ವನಿ ಯಿಂದ ಸಭಾಗೃಹವು ಇಟ್ಟಣಿಸಿತು. ಈ ಬಹುಮಾನ ಕೊಡುವ ಮೊದಲು ಆಚರಸನು ಎದ್ದು ನಿಂತು ಆತನ ಪೂರ್ವಚರಿತ್ರೆ ಮತ್ತು ಈ ಸಂಗ್ರಾಮದಲ್ಲಿ ಆತನು ಮಾಡಿದ ಪರಾಕ್ರಮವನ್ನು ಸಂಕ್ಷೇಪವಾಗಿ ಹೀಗೆ ತಿಳುಹಿದನು.

''ಈತನು ನನ್ನ ರಾಜ್ಯದಲ್ಲಿಯ ಬೆಣ್ಣೆಕಲ್ ಎಂಬ ಊರಿನವನು. ಹೆಸರು ದಳವಾಯಿ ದುರಗಣ್ಣ. ಕೆಚ್ಚೆದೆಯ ಕಲಿ, ಅತ್ಯಂತ ವಿಶ್ವಾಸಿಕ. ನನ್ನ ಜೀವರಕ್ಷಾದಳದ ನಾಯಕತ್ವವನ್ನು ವಹಿಸಿ ನಿರತಿಶಯ ನಿಷ್ಠೆಯಿಂದ ಕ್ಷಾತ್ರಧರ್ಮವನ್ನು ಆಚರಿಸಿದವನು. ನನ್ನ ಜೀವನದ ನಿತ್ಯ ಸಹಚರನಾಗಿ ಅನೇಕ ಸಮರಗಳಲ್ಲಿ ಹೋರಾಡಿ ಅನೇಕ ಸಂಕಟಗಳಲ್ಲಿ ನನ್ನ ಪ್ರಾಣವನ್ನು ಕಾಪಾಡಿದ ವೀರರತ್ನ. ಇದೀಗ ದೂರವಾಗಿರುವ ಸಾಮ್ರಾಜ್ಯದ ಮೇಲಿನ ಈ ಗಂಡಾಂತರದ ವರ್ತಮಾನವನ್ನು ಕೇಳಿ ತಾನು ಸೇವಾನಿವೃತ್ತನಾಗಿದ್ದರೂ ನನ್ನ ಸೂಚನೆಯ ಮೇರೆಗೆ ಕೈಯಲ್ಲಿ ಕತ್ತಿಯನ್ನು ಎತ್ತಿಕೊಂಡು ಈ ಮುಪ್ಪಿನ ಕಾಲದಲ್ಲಿ ಮತ್ತೆ ನನ್ನ ಜೊತೆಗಾರನಾಗಿ ಈ ವಿಷಯ ಸಂಗ್ರಾಮದಲ್ಲಿ ಧುಮು ಕಿದನು. ಪ್ರಯಾಣದ ಕಷ್ಟಗಳನ್ನು ಗಮನಿಸದೆ ನೂರು ನೂರು ಹರದಾರಿ

ಗಳನ್ನು ನಡೆದು ದುರ್ಗಮವಾದ ಸಹ್ಯಾದ್ರಿಗಿರಿಯನ್ನು ಉಲ್ಲಂಘಿಸಿ ಗೋವೆಗೆ ಸಾಗಿದನು. ಗೋವೆಯ ಪಟ್ಟಣದಲ್ಲಿ ಮೊದಲು ನುಗ್ಗಿದ ಮಂಡಲದ ನಾಯಕನು ಈತನು; ಆ ಕಾದಂಬ ರಾಜಧಾನಿಯಲ್ಲಿ ಕಾಲೂರಿದ ನನ್ನ ಸೈನಿಕರಲ್ಲಿ ಮೊದಲಿಗ. ಆ ರಾಜಧಾನಿಯಲ್ಲಿ ಕಾಲಿಟ್ಟ ಕೂಡಲೇ ಈತನು ತನ್ನ ಅನುಯಾಯಿಗಳೊಂದಿಗೆ ನೇರವಾಗಿ ನುಸುಳಿ, ಅರಮನೆಯ ಮೇಲೆ ಏರಾಟ ಮಾಡಿದನು. ಆ ರಾಜಮಂದಿರದ ಮೇಲೆ ಹಾರಾಡುತ್ತಿದ್ದ ಕಾದಂಬರ ಕಪಿಧ್ವಜವನ್ನು ಕಿತ್ತುಬಿಸುಟು ಅದರ ಸ್ಥಳದಲ್ಲಿ ಚಾಲುಕ್ಯರ ವರಾಹಧ್ವಜವನ್ನು ಸ್ಥಾಪಿಸಿದನು. ಇತನೀ ಮಹಾ ಸಾಹಸದ ಕೃತಿಯಿಂದ ನನ್ನ ಸೈನ್ಯದಲ್ಲಿ ವೀರಶ್ರೀ ಸಂಚರಿಸಿತು. ಅದು ಆತನನ್ನು ಅನುಸರಿಸಿ ಅನೇಕ ಪರಾಕ್ರಮ ಕೃತಿಗಳನ್ನು ಎಸಗಲು ಸಮರ್ಥವಾಯಿತು!''

ಅನಂತರ ವಿಕ್ರಮಾದಿತ್ಯನು ಆಚರಸನನ್ನು ಸನ್ಮಾನಿಸಿದನು. ಸಿಂದ ಅರಸರ ಅಸೀಮ ಸಾಮ್ರಾಜ್ಯ ನಿಷ್ಠೆಯನ್ನು ಪ್ರಶಂಸಿಸಿ ಆಚರಸನು ಆಯ ಕಟ್ಟಿನ ಅನೇಕ ಸಂದರ್ಭಗಳಲ್ಲಿ ತನ್ನ ನೆರವಿಗೆ ಬಂದು ಸಾಮ್ರಾಜ್ಯಕ್ಕೆ ಪರಿ ಪರಿಯಿಂದ ಹೇಗೆ ಉಪಕಾರ ಮಾಡಿರುವನು ಎಂಬುದನ್ನು ಬಣ್ಣಿಸಿದನು. ಆತನ ದಕ್ಷತೆ, ಪರಾಕ್ರಮ, ಅಚಲಿತ ಧೈರ್ಯ, ಮುಂತಾದ ಸದ್ಗುಣಗಳನ್ನು ಎತ್ತಿತೋರಿಸಿ ಆತನ ವಿನೀತವೃತ್ತಿಯನ್ನು ವಿವರಿಸಿದನು. ಈ ಗೌರವ ಸಮಾರಂಭದಲ್ಲಿ ತನಗೆ ಯಾವ ಬಗೆಯ ಹೆಚ್ಚಿನ ಗಣ್ಯತೆಯಾಗಲಿ, ಬಹು ಮಾನವಾಗಲಿ ಬೇಡ ಎಂದು ಆತನು ಬಿನ್ನವಿಸಿದುದನ್ನು ಸಭಿಕರ ಲಕ್ಷ್ಯಕ್ಕೆ ತಂದನು. ಆತನು ಎಷ್ಟು ಬೇಡವೆಂದರೂ ಅಲ್ಪಪ್ರಮಾಣದಲ್ಲಿಯಾದರೂ ಆತನನ್ನು ಮರ್ಯಾದಿಸುವುದು. ತನ್ನ ಧರ್ಮವಾಗಿದೆ ಎಂದು ಹೇಳಿದನು. ಅರ್ಹರನ್ನು ಅವರ ಅರ್ಹತೆಗೆ ಅನುಗುಣವಾಗಿ ಆದರಿಸುವುದು ಜನಾಂಗಕ್ಕೂ ರಾಷ್ಟ್ರಕ್ಕೂ ಹಿತಕರವಾದುದು. ಆದುದರಿಂದ ಆಚರಸನ ಈ ಮಹಾ ಸೇವೆಯ ಅಲ್ಪ ಪ್ರತಿಫಲವೆಂದು, ಪಿತ್ರಾರ್ಜಿತವಾಗಿ ಬಂದು ಆತನು ಉಪ ಭೋಗಿಸುತ್ತಿದ್ದ ಕಿಸುಕಾಡು, ಬೆಳ್ವಲನಾಡಿನ ನರೆಯಂಗಲ್, ಅಬ್ಬೆಗೆರೆ ಮುಂತಾದ ಊರುಗಳು ಈ ಪ್ರದೇಶದ ಒಡೆತನದ ಜೊತೆಗೆ ಬಾಗಡಿಗೆ, ಕೇಳ ವಾಡಿ ಮುಂತಾದ ನಾಡುಗಳ ರಾಜ್ಯಾಧಿಕಾರವನ್ನೂ ಆತನಿಗೆ ನೀಡಿರುವುದಾಗಿ ಅಪ್ಪಣೆ ಕೊಡಿಸಿದನು. ಇದಲ್ಲದೆ 'ಮಹಾಮಂಡಲೇಶ್ವರ ಮೇರು' ಎಂಬ

ಬಿರುದನ್ನೂ ಆತನಿಗೆ ಸಲ್ಲಿಸಿರುವುದಾಗಿ ಪ್ರಕಟಿಸಿದನು. ವಿಕ್ರಮಾದಿತ್ಯನ ಮಾತುಗಳು ಮುಗಿದ ಬಳಿಕ ಆಚರಸನು ಎದ್ದು ತಲೆವಾಗಿ ಕೈಜೋಡಿಸಿ ನಿಂತು, "ಮಾಡಲಿಕ್ಕೆ ನಾನು ಎಷ್ಟರವನು; ಇದೆಲ್ಲವು ಶ್ರೀದೇವಿಯ ಪ್ರಸಾದ ಮತ್ತು ಗುರುಗಳ ಕರುಣಾವಿಲಾಸ!" ಎಂದು ನುಡಿದನು. ಆಚರಸನ ಈ ವೈಭವವನ್ನೂ ವಿನಯವನ್ನೂ ನೋಡಿ ಜನಗಳು ಅಚ್ಚರಿಗೊಂಡರು.

ಮರುದಿನ 'ಮಿತಾಕ್ಷರಾ' ಗ್ರಂಥದ ಪ್ರಕಟನಾ ಸಮಾರಂಭ; ಕವಿ ಶೇಖರ ವಿದ್ಯಾಪತಿ ಬಿಹ್ಲಣನ ನೇತೃತ್ವದಲ್ಲಿ ನಡೆಯಿತು. ವಿಜ್ಞಾನೇಶ್ವರ ಯತಿಗಳು ಉನ್ನತವಾದ ಅಗ್ರಾಸನದಲ್ಲಿ ಮೌನವಾಗಿ ಮಂಡಿತರಾಗಿದ್ದರು. ಅವರ ಪಕ್ಕದಲ್ಲಿ ಅವರಾ ಗ್ರಂಥವನ್ನು ಎತ್ತರವಾದ ಪೀಠದಲ್ಲಿ ಅಲಂಕಾರ ಪೂರ್ವಕ ಸ್ಥಾಪಿಸಿದ್ದರು. ವಿದ್ಯಾಪತಿ ಪ್ರಾಸ್ತಾವಿಕ ತನ್ನ ಭಾಷಣದಲ್ಲಿ 'ಮಿತಾಕ್ಷರಾ' ಗ್ರಂಥದ ನಿರ್ಮಿತಿಗೆ ಪಾರ್ಶ್ವಭೂಮಿಯಂತಿರುವ ಆ ರಾಜ್ಯದ ವಿದ್ಯಾವಂತಿಕೆಯನ್ನು ವಿಶದಗೊಳಿಸಿದನು. ವಿಕ್ರಮಾದಿತ್ಯದೇವನ ರಾಜ್ಯ ಪರಿಪಾಲನೆಯ ಒಂದು ವೈಶಿಷ್ಟ್ಯವಾಗಿರುವ ವಿದ್ಯಾಭಿವೃದ್ಧಿಯನ್ನು ಎತ್ತಿ ತೋರಿಸಿದನು.

"ಈ ರಾಜೇಶ್ವರನು ಸ್ವತಃ ಅನೇಕ ವಿದ್ಯೆ ಕಲೆಗಳಲ್ಲಿ ಕುಶಲಮತಿ ಯಾಗಿರುವನಲ್ಲದೆ ತನ್ನ ರಾಷ್ಟ್ರದಲ್ಲಿ ಇವುಗಳಿಗೆ ವಿಶೇಷವಾದ ಪ್ರೋತ್ಸಾಹ ವನ್ನು ನೀಡುತ್ತಿರುವನು. ಈತನ ಔದಾರ್ಯದಿಂದ ಆಕರ್ಷಿತವಾದ ಅನೇಕ ಬುದ್ಧಿವಂತರು, ಪಂಡಿತರು ಹೊರಗಣ ನಾಡುಗಳಿಂದ ಬಂದು ಈ ರಾಜ್ಯದಲ್ಲಿ ನೆಲಸಿರುವರು. ಈ ರಾಜ್ಯದ ಊರೂರಲ್ಲಿಯ ಮಠಗಳಲ್ಲಿ, ದೇವಾಲಯ ಗಳಲ್ಲಿಯ ಶಾಲೆಗಳೂ ಅನೇಕ ವಿದ್ಯಾಸಂಸ್ಥೆಗಳೂ ನಡೆಯುತ್ತಿರುವುವು. ನನ್ನ ಜನ್ಮಭೂಮಿಯಾದ ಸೊಬಗಿನ ಕಾಶ್ಮೀರದೇಶವು ವಿದ್ಯೆಯ ಆಗರ, ಸರ ಸತಿಯ ತವರು ಎಂದು ಖ್ಯಾತಿವೆತ್ತಿದೆ. ಆದರೆ ಈ ವಿಕ್ರಮಾಂಕ ಚಕ್ರ ವರ್ತಿಯ ವಿದ್ಯಾವಿಷಯಕ ನೀತಿಯ ಫಲವಾಗಿ ಈ ಕುಂತಲದೇಶವು ಕಾಶ್ಮೀರ ವನ್ನು ಮೀರಿಸಿದೆ. 'ಕಾಶ್ಮೀರವಾಸಿನೀ' ಎಂದು ನಾಮಾಂಕಿತೆಯಾದ ದೇವಿ ಶಾರದೆ "ಕುಂತಲ ವಾಸಿನಿ"ಯಾಗಿ ಇದೀಗ ಇಲ್ಲಿ ನಲಿನಲಿಯುತ್ತಿ ದ್ದಾಳೆ. ಕುಂತಲರಾಷ್ಟ್ರನಿವಾಸಿಗಳ ಮುಖದಮೇಲೆ ವಿದ್ಯೆ, ಬುದ್ಧಿವಂತಿಕೆ, ರಸಿಕತೆಯ ತೇಜವು ಬೆಳಗುತ್ತಲಿದೆ. ಚಿಕ್ಕವರು, ಹೆಂಗಳೆಯರು, ಹಳ್ಳಿಯ

ಜನಗಳು ಸಹ ಕಾವ್ಯ, ನಾಟಕ, ಶಾಸ್ತ್ರ, ಕಲೆಗಳಲ್ಲಿ ಅಭಿರುಚಿಯುಳ್ಳವರು ಆಗಿರುವರು. ಮಹಾಜ್ಞಾನಿ ಯತಿರಾಜ ವಿಜ್ಞಾನೇಶ್ವರರು ರಚಿಸಿದ ಈ ಗ್ರಂಥವು ಈ ರಾಷ್ಟ್ರದ ವಿದ್ವತ್ತಿಗೆ ಶಿಖರಪ್ರಾಯವಾಗಿದೆ.''

ಮುಂತಾಗಿ ವಿದ್ಯಾಪತಿ ಭಾಷಣಮಾಡಿದನು. 'ಮಿತಾಕ್ಷರಾ' ಗ್ರಂಥ ದೊಳಗಿನ ಕೆಲವು ಭಾಗಗಳನ್ನು ಓದಿ, ಅರ್ಥವನ್ನು ವಿವರಿಸುತ್ತ, ಅದರ ಮಹತ್ತ್ವವನ್ನೂ ಸಾರ್ವಜನಿಕ ಉಪಯುಕ್ತತೆಯನ್ನೂ ಸರ್ವರಿಗೂ ಬೋಧೆ ಯಾಗುವಂತೆ ಸ್ಪಷ್ಟಪಡಿಸಿದನು. ಆಮೇಲೆ ವ್ಯಾಸಪೂಜೆಯ ಕಾರ್ಯಕ್ರಮ. ವಿಪ್ರೋತ್ತಮರು ವಿಜ್ಞಾನೇಶ್ವರ ಯತಿಗಳನ್ನು ಮತ್ತು ಅವರಾ ಗ್ರಂಥವನ್ನು ವಿಧಿಪೂರ್ವಕವಾಗಿ ಪೂಜಿಸಿದರು. ಬಳಿಕ ನೆರೆದ ಪಂಡಿತರನ್ನು ಮತ್ತು ವಿದ್ಯಾವಂತರನ್ನು ವಸ್ತ್ರ, ಅಲಂಕಾರ, ಸಂಭಾವನೆಗಳಿಂದ ಸನ್ಮಾನಿಸಲಾ ಯಿತು. ಕೊನೆಗೆ ಸಮಾರಂಭವನ್ನು ಮುಕ್ತಾಯಗೊಳಿಸುತ್ತ ವಿದ್ಯಾಪತಿ ಹೀಗೆ ನುಡಿದನು:

"ಈ ಲೋಕದಲ್ಲಿ ಕುಂತಲದಂತಹ ರಾಷ್ಟ್ರವಿಲ್ಲ; ಅದರ ಪ್ರಧಾನ ರಾಜಧಾನೀ ಪಟ್ಟಣವಾದ ಈ ಕಲ್ಯಾಣನಗರಿಯನ್ನು ಹಿಂದೂಡಬಲ್ಲ ಪಟ್ಟಣ ವಿಲ್ಲ; ವಿಕ್ರಮಾಂಕದೇವನಂತಹ ಚಕ್ರೇಶ್ವರನನ್ನು ಕಾಣುವುದು ಸುಲಭ ವಲ್ಲ; ವಿಜ್ಞಾನೇಶ್ವರರಂತಹ ತಪೋಜ್ಞಾನ ಸಂಪನ್ನ ನಿಸ್ಪೃಹ ಯತಿವರರು ಅನ್ಯ ಅರಸರ ನೆರಳಿಗೆ ನಿಲ್ಲತಕ್ಕವರಲ್ಲ! ಇಂತಹ ಈ ರಾಜ್ಯ, ಈ ರಾಜೇಶ್ವರ, ಈ ರಾಜಯೋಗಿ, ಈ ಮೂರು ಚಿರಕಾಲ ಬಾಳಲಿ.'' ಕಾಶ್ಮೀರದಂತಹ ದೂರದೇಶಸ್ಥನಾದ ಕವಿ ಬಿಹ್ಲಣನ ಈ ಉಕ್ತಿಗಳನ್ನು ಜನಗಳು ಬಹು ಕುತೂ ಹಲದಿಂದ ಕೇಳಿದರು. ಆತನ ಮಾತುಗಳಿಂದ ಅವರಲ್ಲಿ ಸ್ವಾಭಿಮಾನವು ಹೆಚ್ಚಿತು; ವಿದ್ಯೆಯ ಆಸಕ್ತಿ ಅಧಿಕವಾಯಿತು.

ಮೂರನೆಯ ದಿವಸ ವಿದ್ಯಾಪತಿ ಕವಿವರ ಬಿಹ್ಲಣನ 'ವಿಕ್ರಮಾಂಕದೇವ ಚರಿತಂ' ಎಂಬ ಸಂಸ್ಕೃತ ಕಾವ್ಯದ ಪ್ರಕಾಶನ. ವಿಜ್ಞಾನೇಶ್ವರರ ಅಧಿಷ್ಠಾನ ದಲ್ಲಿ ನೆರವೇರಿತು. ಕವಿಯ ಸತ್ಕಾರವು ಇದರ ಪ್ರಾರಂಭದ ಸಂನಿವೇಶ ವಾಗಿದ್ದಿತು. ಇದು ವಿಕ್ರಮಾದಿತ್ಯನ ಸಮಕ್ಷದಲ್ಲಿ ನಡೆಯಿತು. ಆಸ್ಥಾನ ಬಹುಮೂಲ್ಯ ವಸ್ತ್ರಾಭರಣ, ಛತ್ರ, ಚಾಮರ, ಪಲ್ಲಕ್ಕಿ ಮೊದಲಾದ ಸನ್ಮಾನ ಗಳನ್ನು ಕವಿರಾಜನಿಗೆ ಸಮರ್ಪಿಸಿದನು. ಬಳಿಕ ವಿಕ್ರಮಾದಿತ್ಯನು ಸ್ವಹಸ್ತ

ದಿಂದ ಅಮೂಲ್ಯ ನವರತ್ನದ ಹಾರವನ್ನು ಕವಿಯ ಕೊರಳಲ್ಲಿ ಹಾಕಿದನು. ತರುವಾಯ ಹಲವು ಸಾಮಂತರು. ದಂಡನಾಯಕರು, ಮಹಾಮಂಡಲೇಶ್ವರ ಮುಂತಾದವರು ತಮ್ಮ ತಮ್ಮ ಪರಿಯಿಂದ ಕವಿಗೆ ಕಾಣಿಕೆಗಳನ್ನು ಸಲ್ಲಿಸಿದರು. ಈ ಹೊತ್ತಿಗೆ ವಿಕ್ರಮಾದಿತ್ಯನು ಎದ್ದು ಬೇರೆ ಅಗತ್ಯದ ಕೆಲಸದ ನಿಮಿತ್ತ ತನಗೆ ಹೋಗಬೇಕಾಗಿದೆಯೆಂದು ವಿಜ್ಞಾನೇಶ್ವರರಿಗೆ ಅಪ್ಪಣೆ ಕೇಳಿದನು. ಆದಕ್ಕೆ ಅವರು ನಸುನಗೆಯ ಮೊಗವನ್ನು ತೂಗಾಡಿಸಿ 'ಆಗಬಹುದು' ಎಂದು ಹೇಳಿದರು. ವಿಕ್ರಮಾದಿತ್ಯನು ಹೊರಟು ಹೋದನು.

ಆ ಮೇಲೆ ವಿಜ್ಞಾನೇಶ್ವರರು ಒಂದು ಉಪನ್ಯಾಸವನ್ನು ಮಾಡಿ ವಿಕ್ರಮಾದಿತ್ಯನ ರಾಜನೀತಿಯ ತಿರುಳನ್ನು ವಿವರಿಸಿದರು. "ಧರ್ಮವೇ ಈತನ ರಾಜನೀತಿಯ ಅಸ್ತಿವಾರವಾಗಿದೆ. ಈತನ ಎಲ್ಲ ರಾಜಕೀಯ ಕಾರ್ಯಕಲಾಪಗಳು ಮುಖ್ಯವಾಗಿ ಉದಾರವಾದ ನೈಜಧರ್ಮ ಬುದ್ಧಿಯಿಂದ ಪ್ರೇರಿತವಾದುವು. 'ಸಮಾಜವನ್ನು ಧಾರಣಮಾಡುವಂತಹದು, ಜನಾಂಗಕ್ಕೆ ಶ್ರೇಯಸ್ಕರವಾದುದು, ರಾಷ್ಟ್ರವನ್ನು ಉನ್ನತಗೊಳಿಸುವಂತಹದು ಧರ್ಮ' ಎಂದು ಮನು ಮೊದಲಾದ ಮಹರ್ಷಿಗಳು ತೋರಿಸಿಕೊಟ್ಟ ಧರ್ಮದ ಮೂಲ ಉದ್ದೇಶವನ್ನು ಅನುಸರಿಸಿ ಈತನು ಬಹುಮಟ್ಟಿಗೆ ವರ್ತಿಸುತ್ತಿರುವನು. ಶೈವ, ಪಾಶುಪತಿ, ಲಾಕುಳ, ಗಾಣಪತ್ಯ, ಜೈನ, ವೈಷ್ಣವ ಮೊದಲಾದ ಧರ್ಮ ಪಂಥಗಳು ಈ ರಾಜ್ಯದಲ್ಲಿ ನೆಮ್ಮದಿಯಾಗಿ ಬಾಳಿರುವವಲ್ಲದೆ ಈ ರಾಜನಿಂದ ಪೋಷಣೆಯನ್ನು ಪಡೆಯುತ್ತಿರುವುವು. ಈತನು ದಿನಪ್ರತಿ ನೀಡುವ ನಿತ್ಯ ದಾನಗಳು, ಆಗಾಗ ಪರ್ವಪುಣ್ಯ ಕಾಲಗಳಲ್ಲಿ, ಪವಿತ್ರ ತೀರ್ಥಕ್ಷೇತ್ರಗಳಲ್ಲಿ ನೀಡುವ ಮಹಾದಾನಗಳು, ಇವುಗಳಿಂದ ಈ ರಾಷ್ಟ್ರದಲ್ಲಿ ಐಹಿಕಹಿತವು ಪಾರಮಾರ್ಥಿಕ ಕಲ್ಯಾಣವು ಬಹುವಾಗಿ ವೃದ್ಧಿಯಾಗುತ್ತಲಿದೆ. ಪಂಡಿತರು, ಆಚಾರ್ಯರು, ಶಾಸ್ತ್ರಜ್ಞರು, ಕವಿಗಳು, ಮಠ, ದೇವಾಲಯ, ವಿದ್ಯಾಪತಿ, ಧರ್ಮಶಾಲೆ, ಕೆರೆ, ಬಾವಿ, ಸತ್ರ, ಅರವಂಟಿಗೆ, ಇವುಗಳಿಗೆ ಈತನು ಕೊಟ್ಟಷ್ಟು ದಾನಗಳನ್ನು ಮಿಕ್ಕವರಾರೂ ಕೊಟ್ಟಿರಲಾರರು.

ಇಂತು ಘನತೆವೆತ್ತ ಮಹಾಪುರುಷ ಈ ವಿಕ್ರಮಾದಿತ್ಯ. ಲೋಕಕ್ಕೆ ಆದರ್ಶಭೂತವಾದ ಈತನ ಈ ಚಾರಿತ್ರವು ಕವಿಗಳ ಪ್ರತಿಭೆಯನ್ನು ಸ್ಫೂರ್ತಿಗೊಳಿಸಿ ತನ್ನನ್ನು ಅವರ ಕಾವ್ಯದ ವಸ್ತುವಾಗಿಸಿಕೊಂಡಡೆ ಅಚ್ಚರಿಯಲ್ಲ.

ಆದುದರಿಂದ ಈತನ ರಾಜ್ಯವು ಧರ್ಮರಾಜ್ಯ, ಈತನ ಸದ್ಧರ್ಮದ ರಾಜ್ಯಪರಿಪಾಲನೆಯಿಂದ ಕಲಿಯುಗವು ಕೃತಯುಗವಾಯಿತು. ಮುಂತಾಗಿ ಅಲ್ಲಲ್ಲಿ ಅನೇಕ ಕವಿಗಳು ವರ್ಣಿಸುತ್ತಿರುವುದು ಕೇವಲ ಕವಿಕಲ್ಪನೆಯಿಂದಾಗಲಿ, ಅತ್ಯುಕ್ತಿಯಿಂದಾಗಲಿ ಭಾವಿಸಲು ಅವಕಾಶವಿಲ್ಲ.'' ಮುಂತಾಗಿ ಉದಾಹರಣೆಗಳ ಮೂಲಕ ಸ್ವಲ್ಪ ಮಾತುಗಳಿಂದ ಬಹಳ ಅಭಿಪ್ರಾಯವನ್ನು ಸೂಚಿಸುತ್ತ ಗಂಭೀರವಾಗಿ ಪ್ರತಿಪಾದಿಸಿದನು.

ತರುವಾಯ ವಿದ್ಯಾಪತಿ ಬಿಲ್ಹಣನು ಚಿಕ್ಕ ಭಾಷಣವನ್ನು ಮಾಡಿ ತಾನು ರಚಿಸಿದ 'ವಿಕ್ರಮಾಂಕದೇವ ಚರಿತಂ' ಎಂಬ ಕಾವ್ಯದೊಳಗಿನ ಕೆಲವು ಮಾರ್ಮಿಕವಾದ, ರಸವತ್ತಾದ ಪದ್ಯಗಳನ್ನು ಮಧುರವಾಗಿ ಓದಿ ತೋರಿಸಿ ಸಭಿಕರನ್ನು ತಲೆದೂಗಿಸಿದನು. ಆತನು ಹೇಳಿದ ಅರ್ಥವತ್ತಾದ ಈ ಮಾತುಗಳು ಶ್ರೋತೃಗಳ ಮನಸ್ಸಿನಲ್ಲಿ ಅಚ್ಚಳಿಯದಂತೆ ಆಳವಾಗಿ ಮೂಡಿ ನಿಂತುಕೊಂಡವು :

''ಗುಣವಂತನೇ ಗುಣವನ್ನು ಮೆಚ್ಚಬಲ್ಲನು. ಗುಣಹೀನನು ಬಲ್ಲನೇ ? ಎಷ್ಟು ದೂರವಿದ್ದರೂ ಮಧುವನ್ನು ಅರಸುತ್ತ ಮರಿದುಂಬಿ ತಾವರೆಯತ್ತ ಓಡಿ ಬರುವುದು. ಕಾಶ್ಮೀರವೆಲ್ಲಿ, ಕುಂತಲವೆಲ್ಲಿ ! ಅಷ್ಟು ವಿಸ್ತಾರವುಳ್ಳ ನನ್ನ ಭೂಮಾತೆ ನನ್ನೊಬ್ಬನನ್ನು ಸಲಹಲಾರದಷ್ಟು ಅಗತಿಕಳೇ? ಅಲ್ಲಿಯ ಅರಸರಾದರೂ ಅಷ್ಟುಮಟ್ಟಿಗೆ ಅರಸರೇ ? ಅಲ್ಲ. ಒಂದೊಂದು ವಸ್ತುವಿಗೆ ತಕ್ಕುದಾದ ಒಂದೊಂದು ಸ್ಥಾನವಿರುತ್ತದೆ. ಅಲ್ಲಿದ್ದರೆ ಅದು ಒಪ್ಪುವುದು. ಬುಧ ಶುಕ್ರಾದಿ ಗ್ರಹಗಳು ಸೂರ್ಯಮಾಲೆಯನ್ನು ಸೇರಿದುದು ಉಚಿತವೇ ಸೈ. ಅವುಗಳಿಂದ ಕವಿರಾಜನಿಗೆ ಗೌರವ ಬಂದಿದೆ ಎನ್ನುವುದಕ್ಕಿಂತ ಆತನ ಮೂಲಕ ಅವುಗಳಿಗೆ ಸ್ವ-ಸ್ವರೂಪ-ಸಂಪತ್ತಿಯ ಲಾಭವಾಗಿದೆ ಎನ್ನುವುದು ನಿಜ. ಈ ತೇಜಸ್ಸು, ಈ ಆಕರ್ಷಕತೆ ಈ ಚಕ್ರೇಶ್ವರನದು ! ಈತನ ಅಸಾಧಾರಣ ವಿಭೂತಿತ್ವದ ಪರಿಚಯದಿಂದ ನನ್ನಂತಹ ಪಾಮರರನೇಕರು ಕೃತಾರ್ಥರಾಗಿರುವರು.

"ಈ ಕರ್ಣಾಟೇಂದುವಿನ ತಂಬೆಳಕಿನಲ್ಲಿ ವಿಲಕ್ಷಣವಾದ ಸಂಜೀವಿನೀ ಶಕ್ತಿ ಅವಿತುಕೊಂಡಿದೆ. ಈ ಕುಂತಲೇಶ್ವರನು ಭೂತಲವನ್ನು ನಿಷ್ಕಂಟಕ

ಮಾಡಿ ಅರ್ಥಿಗಳ ಮೇಲೆ ಚಿನ್ನದ ಜೊತೆಯಲ್ಲಿ ಸಂತೋಷದ ಮಳೆಯನ್ನು ಸುರಿಸುತ್ತಿರುವನು. ದೈವಾನುಗ್ರಹಕ್ಕೆ ಪಾತ್ರನಾದ ಈ ರಾಜೇಶ್ವರನ ಕೃಪಾ ಛತ್ರವು ಮಾನುಷ ವಿಪತ್ತುಗಳ ಮಾತೇನು, ದೈವೀ ಕುತ್ತುಗಳನ್ನು ದೂರದಲ್ಲಿ ಕಿತ್ತು ಎಸೆದಿರುವುದು. 'ನಮಗೆ ಜೀವನವನ್ನು ನೀಡುವ ಜಲನಿಧಿಗಳೇ ಈತನ ಅಂಕೆಯಲ್ಲಿ ಇರುವುವು. ಇಂತಹ ಈ ಮಹಾಮಹಿಮನನ್ನು ಸೇವಿಸಿ ಧನ್ಯರಾಗುವ' ಎಂದು ಬಗೆದು ಮೇಘಗಳು ಈತನ ರಾಜ್ಯದಲ್ಲಿ ಸಕಾಲಕ್ಕೆ ಸುವೃಷ್ಟಿಯನ್ನು ಸುರಿಯುತ್ತಿರುವುವು. ಈ ರಾಷ್ಟ್ರದಲ್ಲಿ ಭೂಮಿ ಫಲವತ್ತಾಗಿ ಬೆಳೆಯುವುದು, ಬೆಂಗದಿರನು ಬಿಸಿಯಾಗಿ ಉರಿಯನು. ಗಾಳಿಗಳು ಹಿತವಾಗಿ ಬೀಸುವುವು. ಕೇಡಿ-ಕಳ್ಳರ ಉಪಟಳದಿಂದ ಪ್ರಜೆಗಳು ಮುಕ್ತರಾಗಿರುವರು. ಇರುಳಲ್ಲಿಯೂ ಕಾವಲ ಅಗತ್ಯವಿಲ್ಲ. ಬಾಗಲಿಗೆ ಬೀಗ ಹಾಕುವುದು; ಅಗಳಿ ಇಡುವುದು; ಎಂಬುದನ್ನೇ ಜನಗಳು ಅರಿಯರು. ನಿಶಿಯಲ್ಲಿ ಇವರ ಮನೆ ಗಳಿಗೆ ಕೊಳ್ಳೆಯಿಕ್ಕುವವರು ನಿಶಾಚರ ತಸ್ಕರರಲ್ಲ; ನಿರೀಶ್ವರನ ಕರಗಳು!"

ನಾಲ್ಕನೆಯ ಸಮಾರಂಭ ವಿಕ್ರಮಾದಿತ್ಯನ ರಾಜ್ಯಾಭಿಷೇಕದ ವರ್ಧಂತಿ. ಪ್ರಧಾನಮಂತ್ರಿಯ ಪುರಸ್ಕಾರದಲ್ಲಿ ಆಚರಿಸಲಾಯಿತು. ಈ ವರ್ಧಂತಿ ದಿನದ ಮಹತ್ತ್ವ ಮತ್ತು ಇದನ್ನು ಆಚರಿಸುವ ಆವಶ್ಯಕತೆ ಇವು ಗಳನ್ನು ಕುರಿತು - ಬೇರೆ ಬೇರೆ ಸಾಮಂತರೂ ಮಂಡಲೇಶ್ವರರೂ ಅಧಿಕಾರಿ ಗಳೂ ಭಾಷಣಮಾಡಿ ಚಕ್ರೇಶ್ವರನ ವಿಷಯವಾಗಿ ತಮ್ಮಲ್ಲಿ ನೆಲಸಿದ್ದ ಹಾರ್ದಿಕ ಆದರದ ಕಾಣಿಕೆಯನ್ನು ಸಮರ್ಪಿಸಿದರು. "ಈ ವಿಕ್ರಮಾದಿತ್ಯನ ಉದಯವಾದಂದಿನಿಂದ ದೌರ್ಬಲ್ಯ, ಅನ್ಯಾಯ ಮತ್ತು ಅನೀತಿಯ ತಮಸ್ಸು ಓಡಿಹೋಗಿದೆ. ಪಟ್ಟಬಂಧೋತ್ಸವ ಸಂದರ್ಭದಲ್ಲಿ ಇವರು ಮಾಡಿದ ಮೊದ ಲಿನ ಮಹಾಕಾರ್ಯವೆಂದರೆ ನಮ್ಮೀ ಭರತಕ್ಷೇತ್ರವನ್ನು ಆಕ್ರಮಿಸಿದ ಪರ ಕೀಯ ಶಕರಾಜರಿಂದ ಸ್ಥಾಪಿತವಾಗಿ ಅಂಧಪರಂಪರೆಯಿಂದ ಬಹುಕಾಲ ನಡೆದು ಬಂದಿದ್ದ 'ಶಕಕಾಲ' ಗಣನೆಯ ದುಷ್ಟಪದ್ಧತಿಯನ್ನು ತೊಡೆದು ಹಾಕಿ ತಮ್ಮ ಹೆಸರಿನ 'ಚಾಲುಕ್ಯ ವಿಕ್ರಮವರ್ಷ' ಎಂಬ ಹೊಸಕಾಲ ಗಣನೆಯನ್ನು ಪ್ರಾರಂಭಿಸಿದುದು. ಇವರ ಆಳಿಕೆಯಿಂದ ಗೋದಾವರಿ ಮತ್ತು ಕಾವೇರಿ ಎಂಬೀ ಮೇರೆಗಳನ್ನು ಮಿಕ್ಕಿರುವ ನಮ್ಮೀ ಮಹಾಕರ್ನಾಟಕದ ವಿವಿಧಾಂಗ ಗಳಲ್ಲಿ ನವಚೈತನ್ಯವು ಹೊಮ್ಮುತ್ತಲಿದೆ.

"ಕುಂತಲ ರಾಷ್ಟ್ರದ ಚಕ್ರವರ್ತಿಗಳಾದ ಇವರಿಗೆ 'ಕುಂತಲೇಶ್ವರ' ಎಂಬ ಹೆಸರು ಬಹು ಅನ್ವರ್ಥಕವಾಗಿದೆ. ಸುಮಾರು ಒಂದು ಸಾವಿರ ವರುಷ ಹಿಂದೆ ದಕ್ಷಿಣಭಾರತ ಚಕ್ರವರ್ತಿಯೆನಿಸಿದ ಚಕ್ರಾಧಿಪತಿಯೊಬ್ಬನು ಭಾರತ ವರ್ಷದಲ್ಲಿ ನಾಮಾಂಕಿತನಾಗಿರುವನು. ಶಾತವಾಹನ ಕುಲದೀಪಕನೂ ಕುಂತಲಕ್ಕೆ ಒಡೆಯನೂ ಆದ ಆತನಿಗೆ 'ಕುಂತಲ ಶಾತಕರ್ಣಿ' ಎಂದು ಕರೆಯುತ್ತಿದ್ದರು. ನಮ್ಮ ದೇಶವನ್ನು ಆಕ್ರಮಿಸಿದ ಪರಕೀಯ ಶಕರಾಜರನ್ನು ಪರಾಜಯಗೊಳಿಸಿ ತನ್ನ ಸಾರ್ವಭೌಮತ್ವದ ನಿದರ್ಶನವಾಗಿ ಈತನ ಎರಡು ಬಾರಿ ಅಶ್ವಮೇಧ ಯಾಗವನ್ನು ನೆರವೇರಿಸಿದನು. ಇಂತಹ ಆ ಕುಂತಲಪತಿಯ ಕೀರ್ತಿಯನ್ನು ನಮ್ಮೀ ಕುಂತಲೇಶ್ವರರು ಒಂದುಳಿಸಿರುವರು. ಆದರೂ ಹಿಂದೆ ಪುರಾಣಕಾಲ ದಲ್ಲಿ ಈ ಕುಂತಲವ ಹೆಸರನ್ನು ಉದ್ಧಾರವಮಾಡಿದ ಇನ್ನೊಬ್ಬ ಮಹಿಮಾ ಶಾಲಿಯ ಹೆಸರು ಸುವಿಶ್ರುತವಾಗಿದೆ. ಆತನು ಭಗವದ್ಭಕ್ತ ಚಂದ್ರಹಾಸ. ಧರ್ಮಪರಾಯಣತೆಯಲ್ಲಿಯೂ ಪರಮೇಶ್ವರ ಭಕ್ತಿಯಲ್ಲಿಯೂ ಅಗ್ರೇಸರರಾದ ಈ ಕುಂತಲೇಶ್ವರರು ಆ ಮಹಾಭಕ್ತನ ಹೆಸರನ್ನೂ ನೆನಪಿಗೆ ತರುವಂತಹರು ಆಗಿರುವರು" ಎಂಬುದು ಅವರ ಪ್ರತಿಪಾದನೆಯ ಪ್ರಧಾನಾಂಶವಾಗಿದ್ದಿತು.

ಶಾಂತಿಯ ಸಮಾರಂಭವು ಗೆಲುವಿನ ಹಬ್ಬದ ಕೊನೆಯ ಉತ್ಸವ. ಐದ ನೆಯ ದಿನ ಶಾಂತಿಯ ಕಾಂತಿಯಿಂದ ಶೋಭಿಸುತ್ತ ಎಲ್ಲರ ಹೃದಯಗಳಲ್ಲಿ ಶಾಂತಿಯ ಸಂದೇಶವನ್ನು ಬೀರುತ್ತ ಶಾಂತಿಯಿಂದ ಸಾಂಗವಾಯಿತು. ವಿಕ್ರ ಮಾದಿತ್ಯನಿಗೆ ಶಾಂತಿಯ ಶಾಂತಿಪಾಠವನ್ನು ಹೇಳಿಕೊಟ್ಟ, ಲಾಕುಳ ಪರಂ ಪರೆಯ, ಬಳ್ಳಿಗಾವೆಯ ಶಕ್ತಿಪರಂಪರೆಯ ಸೋಮೇಶ್ವರ ಯತಿಗಳು ಅಂದಿನ ಸಭಾಪತಿತ್ವವನ್ನು ವಹಿಸಿ ಸ್ವಸ್ತಿವಾಚನದೊಂದಿಗೆ ಶಾಂತಿ ಮಂತ್ರವನ್ನು ಉಚ್ಚರಿಸಿದರು. ಈ ಹಬ್ಬವನ್ನು ಆಚರಿಸುವ ಉದ್ದೇಶ ಮತ್ತು ಅದರ ರಹಸ್ಯವನ್ನು ಸಭಾಪತಿಗಳು ಹೀಗೆ ವಿಶದಗೊಳಿಸಿದರು.

"ಮೇಲೆ ಮೇಲೆ ನೋಡಿದರೆ ವಿಕ್ರಮಾದಿತ್ಯರಾಜನು ಮಿಕ್ಕ ರಾಜರಂತೆ ಸಮರಾಸಕ್ತನಾಗಿಯೇ ತೋರುವನು. ಈತನು ಸಂಗ್ರಾಮಕುಶಲ, ಮಹಾ ಪರಾಕ್ರಮಿ, ಅಸಹಾಯಶೂರನೆಂಬುದು ಎಲ್ಲರಿಗೂ ತಿಳಿದ ವಿಷಯ. ಈತನು ದಕ್ಷಿಣ ಭಾರತದಲ್ಲಿಯೂ ಉತ್ತರ ಭಾರತದಲ್ಲಿಯೂ ಅನೇಕ ದಂಡಯಾತ್ರೆ ಗಳನ್ನು ನಡೆಸಿದ್ದಾನೆ; ಅನೇಕ ಕಾಳೆಗಗಳನ್ನು ಕಾದಿದ್ದಾನೆ. ಹೆಚ್ಚೇನು,

ಸ್ವತಃ ತನ್ನ ಸೋದರರೊಡನೆಯೂ ಹೋರಾಡಿದ್ದಾನೆ. ಆದರೆ ಇದೆಲ್ಲವು ಕ್ರಮಪ್ರಾಪ್ತ ಕರ್ತವ್ಯವೆಂದು ಮಾಡಿರುವನಲ್ಲದೆ ಕ್ರೌರ್ಯದ ಆವೇಶದಿಂದಲ್ಲ, ಸಂಹಾರದ ಲಾಲಸೆಯಿಂದಲ್ಲ. ಈತನ ಹೃದಯವು ಹಿಂಸೆಗೆ ಹಾತೊರೆಯುತ್ತ ಇಲ್ಲ. ಅದು ಸದಾ ಶಾಂತಿಗಾಗಿ ಹಂಬಲಿಸುತ್ತಿರುವುದು. 'ತನ್ನ ಈ ಪ್ರಜೆಗಳು ಶಾಂತಿಯಿಂದ ಬಾಳಲಿ; ಅವರಿಗೆ ಸುಖ ಸಂತೋಷಗಳು ಲಭಿಸಲಿ; ತನ್ನ ರಾಜ್ಯವು ಉತ್ತಮ ರಾಷ್ಟ್ರವಾಗಿ ಬೆಳೆಯಲಿ' ಎಂಬುದು ಈತನ ಘನವಾದ ಧ್ಯೇಯವು. ಇದರ ಸಾಧನೆಯ ಮಾರ್ಗದಲ್ಲಿ ಉಂಟಾಗುವ ಎಡರುಗಳನ್ನು ಖಂಡಿಸುವುದು ಈತನ ರಾಜಧರ್ಮ. ಯುದ್ಧವು ಯುದ್ಧಕ್ಕೋಸುಗ ಅಲ್ಲ; ಶಾಂತಿಗೋಸುಗ, ಜನಾಂಗದ ಸಮೃದ್ಧಿಗೋಸುಗ ಎಂಬ ಉದಾತ್ತ ರಾಜನೀತಿ ಈತನದು. ಜನಗಳನ್ನು ಬಲಿಕೊಟ್ಟು ಜನಾಂಗಗಳನ್ನು ಪಾದಾಕ್ರಾಂತ ಮಾಡಿ ಸಾಮ್ರಾಜ್ಯದ ಸಡಗರವನ್ನು ಮೆರೆಸಬೇಕು ಎಂಬ ಮಹತ್ವಾಕಾಂಕ್ಷೆ ಈತನಿಗಿಲ್ಲ. ಧರ್ಮವು ಲೋಕದಲ್ಲಿ ವೃದ್ಧಿಯಾಗಬೇಕು; ಜನಗಳು ನೀತಿವಂತರಾಗಬೇಕು; ಅವರಲ್ಲಿ ವಿದ್ಯೆ, ಬುದ್ಧಿ, ಕಲೆ, ಆರೋಗ್ಯ, ಸಂಪತ್ತಿ ಅಭಿವರ್ಧಿಸಿ ಜನಾಂಗದ ನಾಗರಿಕತೆ ಊರ್ಜಿತವಾಗಬೇಕು ಎಂಬುದು ಈತನ ಮಹತ್ತರ ಆಸೆ. ಈ ಶಾಂತಿಯ ಹಬ್ಬದ ಮೂಲಕ ಈತನ ಈ ಉದ್ದೇಶವನ್ನು, ರಾಜನೀತಿಯ ಈ ರಹಸ್ಯವನ್ನು ಈತನ ಅಧಿಕಾರಿಗಳು, ಅಂಕಿತ ಅರಸರು, ನೆರೆಯ ರಾಜರು, ಜನಗಳು, ಸರ್ವರು ಅರಿತು ಶಾಂತಿ ಸ್ಥಾಪನೆಯ ಮಹಾಕಾರ್ಯದಲ್ಲಿ ಈತನಿಗೆ ನೆರವಾಗಬೇಕು. ಇದರಿಂದ ಎಲ್ಲರಿಗೂ ಹಿತವಾಗುವುದು. ಯುದ್ಧದಿಂದ ಸಂಭವಿಸುವ ಅನಂತ ಹಿಂಸೆ, ಪರಿಪರಿಯ ಅನರ್ಥಗಳಿಂದ ದೇಶವು ಮುಕ್ತವಾಗಿ ಅಪಾರ ಸುಖಗಳನ್ನು ಅನುಭವಿಸುವುದು.''

'ಗೆಲುವಿನ ಹಬ್ಬ'ದ ವಿವಿಧ ಕಾರ್ಯ ಕಲಾಪಗಳಲ್ಲಿ ಭಾಗವಹಿಸಿ ಸಂತೋಷದಿಂದ ಅರಳುತ್ತಿರುವ ಜನಗಳಿಗೋಸುಗ ಇದಕ್ಕೂ ಉಲ್ಲಾಸಕರವಾದ ಇನ್ನೊಂದು ಉತ್ಸವವು ಸ್ವಲ್ಪ ದಿನಗಳಲ್ಲಿಯೇ ಕಾದುಕೊಂಡಿದ್ದಿತು. ಅದರ ಮುಂಬೆಳಕು 'ಗೆಲುವಿನ ಹಬ್ಬ'ವು ಪ್ರಾರಂಭಿಸುವ ಪೂರ್ವದಲ್ಲಿ ಅಸ್ಪಷ್ಟವಾಗಿ ಪಸರಿಸಿದ್ದರೂ ಈ ಹಬ್ಬವು ಮುಗಿಯುವ ಹೊತ್ತಿಗೆ ಅದರ

ರೂಪರೇಷೆಗಳು ಹೆಚ್ಚು ಸ್ಪಷ್ಟವಾಗಿ, ನಿಶ್ಚಿತವಾಗಿ, ವಿವರವಾಗಿ ಪ್ರಕಾಶಮಾನವಾದುವು.

---

## ಕಿರಣ ಹನ್ನೊಂದು
# ಸುಮಂಗಲಂ

ವಿಕ್ರಮಾದಿತ್ಯನ ಓಲೆಗೆ ಜಯಕೇಶಿಯಿಂದ ಉತ್ತರ ಬಂದಿತು. ಅದರಲ್ಲಿ ಆತನು ವಿಕ್ರಮಾದಿತ್ಯನ ಸೂಚನೆಗೆ ತನ್ನ ಸಮ್ಮತಿಯನ್ನು ತಿಳುಹಿದ್ದನು. ಕಾದಂಬರಿಗೂ ಚಾಲುಕ್ಯರಿಗೂ ಈ ಮೊದಲು ಉಂಟಾಗಿದ್ದ ಸಂಬಂಧವನ್ನು ನಿರ್ದೇಶಿಸಿ, ಕುಂತಲ ಚಕ್ರವರ್ತಿಯೊಡನೆ ಹೀಗೆ ಇನ್ನೊಂದು ಸಲ ಹೊಸದಾಗಿ ಹೆಚ್ಚಿನ ಬಾಂಧವ್ಯವನ್ನು ಬೆಳಸುವ ಸಂಧಿ ದೊರೆತುದು ತನ್ನ ಭಾಗ್ಯವೆಂದು ನಿರೂಪಿಸಿದ್ದನು. ರಾಜಕುಮಾರಿಯನ್ನು ತಾನು ಈ ಮೊದಲು ಕಣ್ಣಾರೆ ಕಂಡಿರುವುದಾಗಿಯೂ ಕಂಡುದಕ್ಕಿಂತ ಹೆಚ್ಚಾಗಿ ಆಕೆಯ ಸೌಜನ್ಯ, ವಿದ್ಯೆ, ಪ್ರತಿಭೆ, ಕಲಾವಂತಿಕೆ ಮೊದಲಾದ ಗುಣಾತಿಶಯಗಳನ್ನು ಬಲ್ಲವರ ಬಾಯಿಂದ ಕಿವಿಯಾರೆ ಕೇಳಿರುವುದಾಗಿಯೂ ನಿವೇದಿಸಿದ್ದನು. ಈ ಓಲೆಯನ್ನು ಓದಿ ವಿಕ್ರಮಾದಿತ್ಯನು ಆನಂದಿತನಾದನು. 'ಶುಭಸ್ಯ ಶೀಘ್ರಂ' ಎಂದು ತಿಥಿ ನಿಶ್ಚಯ ಮಾಡುವುದರಲ್ಲಿಯೂ ನಿಮಗ್ನನಾದನು. ಈ ನಡುವೆ ಪೂರ್ವಸಂಕಲ್ಪದಂತೆ 'ಗೆಲುವಿನ ಹಬ್ಬ'ವು ಒದಗಿ ಬಂದು ಈವರೆಗೆ ವಿವರಿಸಿದಂತೆ ಸರಾಗವಾಗಿ ನೆರವೇರಿತು.

ವೈಶಾಖ ಬಹುಳ ನವಮಿ ಉಭಯತರಿಗೂ ಅನುಕೂಲವಾದ ಮುಹೂರ್ತವೆಂದು ನಿರ್ಧಾರವಾಯಿತು. ಗೋವೆಯಿಂದ ಹೊರಟ ಜಯಕೇಶಿ ತನ್ನ ಪರಿವಾರದೊಂದಿಗೆ ಒಂದು ದಿನ ಮುಂಚಿತ ಕಲ್ಯಾಣನಗರಿಗೆ ಬಂದು ಸೇರುವ ವರ್ತಮಾನ ಬಂದಿತು. ಕಲ್ಯಾಣ ಸಮಾರಂಭದ ಸಿದ್ಧತೆ ಭರದಿಂದ ಮುಂದುವರಿಯಿತು. ಉತ್ಸವದ ಉಲ್ಲಾಸದ ಕಾಂತಿ ಕಲ್ಯಾಣ ರಾಜಧಾನಿಯಷ್ಟೆ ಅಲ್ಲದೆ ಕುಂತಲ ರಾಜ್ಯದ ಮೇಲೂ ಪಸರಿಸಿತು.

"ನನ್ನ ಜೀವನದಲ್ಲಿಯ ಚಿರಸ್ಮರಣೀಯ ಸಂನಿವೇಶಗಳಲ್ಲಿ ಇದು ಅಗ್ರ ಗಣ್ಯವಾದುದು. ಇದರ ಸ್ಮೃತಿ ಲೋಕದಲ್ಲಿ ಚಿರಕಾಲ ಉಳಿಯುವ ಹಾಗೆ ಇದನ್ನು ನೆರವೇರಿಸತಕ್ಕುದು. ಜಯಕೇಸಿ—ಈ ಹೆಸರು ನನಗೆ ಮೆಚ್ಚಿನದು. ಈ ಜಯಕೇಸಿಯ ಮುತ್ತಜ್ಜನ ಹೆಸರೂ ಜಯಕೇಸಿ. ನನ್ನ ಪೂರ್ವ ವಯಸ್ಸಿನಲ್ಲಿ ಚೋಳರಾಜರೊಡನೆ ನಾನು ಹೋರಾಡುತ್ತಿರುವಾಗ ಆತನಿಂದ ನನಗೆ ಸಹಾಯವಾಯಿತು. ಚೋಳರಸ ವೀರರಾಜೇಂದ್ರನೊಡನೆ ಸಂಧಾನ ನಡೆದ ಸಂದರ್ಭದಲ್ಲಿ ಆತನು ಪ್ರಮುಖ ಭಾಗವನ್ನು ವಹಿಸಿದನು. ಆತನ ಆನುವಂಶಿಕ ಈತ. ದೇವಾಂಶಸಂಭೂತ ಅದ್ಭುತ ಪರಾಕ್ರಮಿ ಮಯೂರ ಶರ್ಮನಿಂದ ಉದಿತೋದಿತವಾದ ಸುವಿಖ್ಯಾತ ಕದಂಬ ಕುಲದೀಪಕನು ಈ ಜಯಕೇಸಿ. ರಾಜಕುಮಾರಿಯ ಒಲುಮೆ, ನಮ್ಮ ವಂಶದ ಘನತೆ, ಆತನ ಕುಲದ ಗೌರವ, ಪೂರ್ವಜರ ಸ್ನೇಹಾನುಬಂಧ, ಇವುಗಳಿಗೆ ಅನು ಗುಣವಾಗಿ ಸಮುಚಿತ ಸಂಮಾನದಿಂದ ಆತನನ್ನು ಸತ್ಕರಿಸತಕ್ಕುದು. ಆದುದ ರಿಂದ ಎಲ್ಲವು ತಕ್ಕ ರೀತಿಯಲ್ಲಿ ಅಳವಡುವಂತೆ ಜಾಗರೂಕತೆಯಿಂದ ನೋಡಿ ಕೊಳ್ಳುವುದು" ಎಂದು ವಿಕ್ರಮಾದಿತ್ಯನು ಪ್ರಧಾನ ಮಂತ್ರಿಯನ್ನು ಕರೆದು ನಿರ್ದೇಶಪಡಿಸಿದನು.

ಅರಮನೆಯಲ್ಲಿ ಐರಿಯರಸಿಯರಿಂದ ದಾಸಿಯವರೆಗೆ ಸಕಲರು ಸಂಭ್ರಮದಿಂದ ಉತ್ಸವವನ್ನು ಯಶಸ್ವಿಯಾಗಿಸಲು ಪರಿಪರಿಯಿಂದ ಅನು ವಾದರು. ವಿನಯ ಮೌನಗಳ ಆವರಣದಲ್ಲಿ ಅವಿತುಕೊಂಡಿದ್ದರೂ ಒಳ ಗೊಳಗೆ ಅರಳುತ್ತಿರುವ ರಾಜಕುಮಾರಿಯ ಹೃತ್ಕುಸುಮವು ಅಸ್ಫುಟವಾದ ಒಂದು ಹೊಸ ಶೋಭೆಯನ್ನು ಆಕೆಯ ಅಂಗಾಂಗಗಳಲ್ಲಿ ಸೂಸತೊಡಗಿತು. ಹಿರಿಯರು ಅಧಿಕಾರಿಗಳು ಎಷ್ಟು ಜನರಿದ್ದರೂ ಸಮಾರಂಭಕ್ಕೆ ಸಂಬಂಧಪಟ್ಟ ಕೆಲ ವಿಷಯಗಳಲ್ಲಿ ಆಕೆ ಸೂಕ್ಷ್ಮವಾದ ಲಕ್ಷ್ಯವನ್ನು ಪೂರಯಿಸಿ ಆಗಾಗ ತಾಯಾರ ಚಂದಲದೇವಿಯ ಮುಖಾಂತರ ಇಷ್ಟವಾದ ಆಲೋಚನೆಗಳನ್ನು ಸೂಚಿಸುತ್ತಿದ್ದಳು. ನಗರ ಮತ್ತು ಅರಮನೆಯ ಅಲಂಕಾರ ರಚನೆ ಹಾಗೂ ವರಪಕ್ಷದವರ ಸ್ವಾಗತಯೋಜನೆ ಕಲಾಯುತವಾದ ಒಂದು ವೈಶಿಷ್ಟ್ಯದಿಂದ ಕೂಡಿರಬೇಕು ಎಂಬುದು ಆಕೆಯ ಆಕಾಂಕ್ಷೆ. ಮಹಾಮಂಡಲೇಶ್ವರ ಆಚರ ಸನು ಸ್ವಾಗತ ಸಮಾರಂಭದ ಹೊಣೆಯನ್ನು ಹೊತ್ತುಕೊಂಡು ಬಹು ತತ್ಪ

ರತೆಯಿಂದ ಹಗಲಿರುಳೆನ್ನದೆ ಶ್ರಮಿಸಿ ಸಂಪೂರ್ಣಗೊಳಿಸಿದನು. ಆತನ ಕಾರ್ಯದಲ್ಲಿ ಪಡೆವಳ ಏಚಿಮಯ್ಯ ನಾಯಕ, ದಳವಾಯಿ ದುರಗಣ್ಣ ಮೊದ ದವರು ಉತ್ಸಾಹದಿಂದ ಸಹಾಯ ನೀಡಿದರು. ಸಮಾರಂಭದ ವಿವಿಧ ಕಾರ್ಯ ಕಲಾಪಗಳಲ್ಲಿ ಒಂದು ಕೆಲಸವನ್ನು ಮಾಡದೆಯೂ ಸರ್ವಕಾರ್ಯ ಗಳನ್ನು ನೆರವೇರಿಸುತ್ತಿರುವ, ಕಣ್ಣಿಗೆ ಕಾಣಿಸದೆ ಇದ್ದರೂ ಕಣ್ಮರೆಯಾಗದ ಒಂದು ವ್ಯಕ್ತಿಯನ್ನು ಮರೆವುದುಂಟೆ? ಕುಂತಲೇಶ್ವರನಿಂದ ಕೂಲಿಯಾಳಿನ ವರೆಗೆ, ಮುಖ್ಯ ಮಂತ್ರಿಯನ್ನು ಹಿಡಿದು ಮದುಮಗಳನ್ನು ಬಿಡದೆ, ಮದುವೆ ಮನೆಯಲ್ಲಿ ಅತ್ತಣಿಂದಿತ್ತ ಇತ್ತಣಿಂದತ್ತ ಎಡೆಬಿಡದೆ ಸುತ್ತಾಡುತ್ತ ವಿನೋದ ಚೇಷ್ಟೆಗಳಿಂದ ನಗೆಯ ಬುಗ್ಗೆಯನ್ನು ಚಿಮ್ಮಿಸುತ್ತಿರುವ ಜೀವಾಣು ವಾಮನ ಮೂರ್ತಿಯ ಕಾರ್ಯಭಾರವೇನು ಅಲ್ಪವೇ?

ಮುಹೂರ್ತದ ಮುನ್ನಾದಿನ ಗೋವೆಯ ಬೀಗರು ಕಲ್ಯಾಣನಗರಿಗೆ ಬಂದರು. ಸೀಮಾಂತಪೂಜನದ ಸಮಾರಂಭದೊಂದಿಗೆ ಅವರನ್ನು ಊರೊ ಳಗೆ ಬರಮಾಡಿಕೊಂಡು ಸೊಗಸಾಗಿ ಸಿಂಗರಿಸಿದ ಮನೋಹರ ಮಂದಿರಗಳಲ್ಲಿ ಉಳಿಸಿಕೊಳ್ಳಲಾಯಿತು.

ಮರುದಿನ ಮಹೂರ್ತಕ್ಕೆ ಸರಿಯಾಗಿ ಮಂಗಲಗೀತ ವಾದ್ಯಗಳ ವೈಭವ ದೊಡನೆ ವಧೂವರರನ್ನು ಕಲ್ಯಾಣ ಮಂಟಪಕ್ಕೆ ಕರೆತಂದರು. ಇಕ್ಕೆಲದ ರಾಜಪುರೋಹಿತರು ವಿಧಿಯುಕ್ತ ಕ್ರಿಯೆಗಳನ್ನು ಮುಂದುವರಿಸುವಲ್ಲಿ ನಿಮಗ್ನ ರಾದರು. ಬಳಿಕ ಮಂಗಲ ಸ್ತೋತ್ರಪಠನ ಘೋಷದ ಮಧ್ಯದಲ್ಲಿ 'ಸುಮಂಗಲಂ ಸಾವಧಾನ, ಸುಶೋಭನಂ ಸಾವಧಾನ' ಎಂಬ ಗರ್ಜನೆ ಕೇಳುತ್ತಲೇ ವಧೂವರರ ನಡುವಿನ ಪರಕೀಯತೆಯ ಅಂತರಪಟವು ಆಚೆಗೆ ಜಾರಿ ಎರಡು ಹೃದಯಗಳು ಸಂಮಿಲಿತವಾದವು. ಪ್ರೇಕ್ಷಕ ಸಮುದಾಯ ದಿಂದ ಮಂಗಲಾಕ್ಷತೆಯ ಸಂತತಧಾರೆ ಅವರ ತಲೆಯಮೇಲೆ ಸುರಿಯುತ್ತ ಈ ಸಂಮಿಲನವನ್ನು ಸಹಸ್ರಶಃ ಅಭಿನಂದಿಸಿತು. ಆಮೇಲೆ ಆರ್ಯಪರಂಪರೆಯು ಕ್ಷತ್ರಿಯರಿಗೆ ಉಚಿತವಾದ ವೈವಾಹಿಕ ಹೋಮಾದಿ ವೈದಿಕ ವಿಧಾನಗಳು ಸಾಂಗವಾಗಿ ಅನುಷ್ಠಾನಗೊಂಡವು. ಗುರು ಹಿರಿಯರುಗಳು ಶುಭ ಆಶೀ ರ್ವಚನಗಳಿಂದ ದಂಪತಿಗಳನ್ನು ಹರಸಿದರು. ತರುವಾಯ ಉಡುಗೊರೆ, ಕಾಣಿಕೆಯ ಲೌಕಿಕ ಸಂನಿವೇಶಗಳು ವಿಸ್ತರಿಸಿದುವು.

ವಧೂವರರಿಗಾಗಿ ಒಪ್ಪಿಸಲಾದ ಉಡುಗೊರೆ ಕಾಣಿಕೆಗಳ ಲೆಕ್ಕವನ್ನು ಎಣಿಸಿ ಹೇಳುವವರಾರು ? ಕುಂತಲ ಸಾಮ್ರಾಜ್ಯದ ಚಿಕ್ಕದೊಡ್ಡ ಅಧಿಕಾರಿಗಳು, ಸಾಮಂತ ಅರಸರು, ಮಾಂಡಲಿಕರು, ಮನ್ನೆಯರು; ಮಹಾಜನ, ವೀರ ಬಣಂಜು, ನಿಕರ, ನಾನಾದೇಸಿ, ಮೊದಲಾದ ಜನಸಂಘದವರು; ಮಠ, ದೇವಾಲಯ, ಘಟಿಕಾಸ್ಥಾನ ಮುಂತಾದ ವಿದ್ಯಾಸಂಸ್ಥೆಯವರು; ಆಚಾರ್ಯರು, ಯತಿಗಳು, ತಪಸ್ವಿಗಳು, ಮೊದಲಾದ ಧರ್ಮಶೀಲರು ತಮ್ಮ ತಮ್ಮ ಪರಿಯಿಂದ ಉಚಿತ ಉಡುಗೊರೆ ಕಾಣಿಕೆಗಳನ್ನು ಸಲ್ಲಿಸಿ ಭಕ್ತಿ ವಿಶ್ವಾಸ, ಅಭಿಮಾನಗಳನ್ನು ಪ್ರದರ್ಶಿಸಿದರು. ಇವುಗಳಿಗಿಂತ ಮಿಗಿಲಾಗಿ ಸಿಂಹಲದ್ವೀಪ, ಚೋಳಮಂಡಲ, ವಂಗ, ಕಾಮರೂಪ, ಕಾಶ್ಮೀರ, ಗುರ್ಜರ, ಲಾಟ, ಆಂಧ್ರ ಮೊದಲಾದ ದೇಶಗಳ ಅರಸರು ತಮ್ಮ ತಮ್ಮ ರಾಯಭಾರಿಗಳ ಮುಖಾಂತರ ಆನೆ, ಕುದುರೆ, ರಥ, ಪಲ್ಲಕ್ಕಿ, ಮೊದಲಾದ ವಾಹನಗಳಲ್ಲಿ ಮಂಡಿಸಿ ಕಳುಹಿದ ಚಿತ್ರವಿಚಿತ್ರ ಕಾಣಿಕೆಗಳು ಹೆಚ್ಚಿಗೆ ಜನರ ಮನಸ್ಸನ್ನು ಆಕರ್ಷಿಸಿದುವು. ಈ ಮಹೋತ್ಸವದ ನಿಮಿತ್ತ ವಿಕ್ರಮಾದಿತ್ಯನು ತನ್ನ ಮಗಳಿಗೂ ಅಳಿಯನಿಗೂ ಚಿನ್ನರನ್ನದ ಅಪೂರ್ವ ಅಲಂಕಾರಗಳು, ಬಹುಮೂಲ್ಯ ವಸ್ತ್ರಗಳು, ಆನೆ ಕುದುರೆ ಸೇವಕ ಸೇವಿಕೆಯರು, ಆಸನ ವಾಹನಗಳು, ಪಾತ್ರೆಗಳು, ಮುಂತಾದ ಹಲವು ವಿಧದ ಪ್ರೀತಿಯ ಪದಾರ್ಥಗಳನ್ನು ಬಹುವಾಗಿ ಸಮರ್ಪಿಸಿದನು.

ಜಯಕೇಸಿಯ ಈ ಐಶ್ವರ್ಯವೂ ಅನ್ಯಾದೃಶವಾದ ಭಾಗ್ಯವೂ ಆ ಸಮಾರಂಭಕ್ಕಾಗಿ ಅಲ್ಲಿಗೆ ಬಂದ ಆತನ ಸರೀಕದ ಸ್ನೇಹಿತ ಸಾಮಂತರಲ್ಲಿಯೂ ಮತ್ಸರಾಸೂಯೆಗಳನ್ನು ಮೊಳೆಯಿಸದೆ ಇರಲಿಲ್ಲ. ಈ ಬಾಂಧವ್ಯದ ಮೂಲಕ ಮೊದಲೇ ಪ್ರಭಾವಶಾಲಿಯಾಗಿದ್ದ ಆತನ ಪ್ರಭಾವವು ಬಹಳ ಪ್ರಬಲಿಸಿತು. ಆತನ ಘನತೆ ಇತರ ಅಂಕಿತ ಅರಸರ ಶಕ್ತಿಯನ್ನೂ ಪದವಿಯನ್ನೂ ಮಿಕ್ಕಿ ಮೀರಿಸಿತು. ಆತನು ಈ ಮೊದಲು ತನ್ನ ಭುಜಬಲ ಪರಾಕ್ರಮದಿಂದ ತನ್ನ ಪಿತ್ರಾರ್ಜಿತ ರಾಜ್ಯವನ್ನು ವಿಸ್ತರಿಸಿಕೊಂಡು ಹೊಸ ಪ್ರಾಂತ್ಯಗಳನ್ನು ಗಳಿಸಿದ್ದನು. ವಿಕ್ರಮಾದಿತ್ಯನು ಆತನಿಗೆ ವರದಕ್ಷಿಣೆಯಾಗಿ ವೇಳುಗ್ರಾಮ ಮೊದಲಾದ ಇನ್ನೂ ಕೆಲ ಪ್ರದೇಶಗಳ ಅಧಿಕಾರವನ್ನು ಕೊಟ್ಟನು. ಇದರಿಂದ ಆತನ ವರ್ಚಸ್ಸು ವಿಶೇಷವಾಗಿ ವೃದ್ಧಿಂಗತವಾಯಿತು.

ಉತ್ಸವದ ಕೊನೆಯ ಸಮಾರಂಭ ಮೆರವಣಿಗೆ. ಉಜ್ವಲ ಅಲಂಕಾರಗಳಿಂದ ಶೋಭಾಯಮಾನವಾದ ಆನೆಯ ಮೇಲೆ ದಂಪತಿಗಳನ್ನು ಕೂರಿಸಿದ್ದರು. ಹಿಂದೆಯೂ ಮುಂದೆಯೂ ನಾನಾ ವಾಹನಗಳಲ್ಲಿ ಮಂಡಿತವಾದ ರಾಜಪರಿವಾರವೂ ನಾಗರಿಕರ ಮಹಾ ಸಮೂಹವೂ ಚಲಿಸುತ್ತಿದ್ದಿತು. ಅಡಿಗಡಿಗೆ, ಮಂಗಲಾರತಿ, ಪೂಮಳೆ, ಕಾಣಿಕೆ ಮುಂತಾದ ಸುಸ್ವಾಗತವನ್ನು ಉತ್ಸವ ಮೂರ್ತಿಗಳಿಗೆ ಪುರಜನರು ನೀಡುತ್ತಿದ್ದರು. ಇಂತು ವಿಜೃಂಭಣೆಯಿಂದ ರಾಜಧಾನಿಯ ಮುಖ್ಯ ಬೀದಿಗಳಲ್ಲಿ ಸಂಚರಿಸಿ ಮೆರವಣಿಗೆ ಮತ್ತೆ ಅರಮನೆಗೆ ಬಂದು ನಿಂತಿತು. ವಧೂವರರು ಕೆಳಗೆ ಇಳಿದು ಮಂದಿರವನ್ನು ಪ್ರವೇಶಿಸಿ ಗುರುಹಿರಿಯರಿಗೆ ವಂದನೆಗಳನ್ನು ಸಮರ್ಪಿಸಿ ಮಂಗಲಾಶೀರ್ವಾದಗಳನ್ನು ಪಡೆದರು. ಇದರಲ್ಲಿ ಅಗ್ರಮರ್ಯಾದೆ ವಿಜ್ಞಾನೇಶ್ವರದು. ತಮ್ಮನ್ನು ಅಭಿವಂದಿಸಿದಾಗ ದಂಪತಿಗಳಿಗೆ ಅವರು ಹೀಗೆ ಉಪದೇಶಗರ್ಭಿತ ಆಶೀರ್ವಾದ ಮಾಡಿದರು.

"ಸುಮಂಗಲಂ ಭೂಯಾತ್! ರಾಜವರ ಜಯಕೇಸಿನ್, ನೀನು ಧನ್ಯ; ರಾಜವಲ್ಲಭೆ ಮೈಳಲದೇವಿ; ನೀನು ಧನ್ಯೆ; ನಿಮ್ಮಿಬ್ಬರನ್ನು ಧನ್ಯರಾಗಿಸಿದ ಕುಂತಲೇಶ್ವರ ಧನ್ಯನು. ಇಂತಹ ಧನ್ಯ ಜೀವಿಗಳನ್ನು ಕಣ್ಣಾರೆ ಕಾಣುತ್ತಿರುವ ನಾನೂ ಧನ್ಯನು. ಜಯಕೇಸಿನ್, ನಿನ್ನ ಮಾವನಾದ ಆ ರಾಜೇಶ್ವರನು ನಿಜವಾದ ರಾಜರ್ಷಿ. ರಾಜನು ರಾಜನಾಗುವುದು ವಿರಾಜಮಾನಕ್ಕಲ್ಲ ಜನಾಂಗವನ್ನು ಚೆನ್ನಾಗಿ ಪರಿಪಾಲಿಸುವುದಕ್ಕೆ. ಋಷಿಗಳು, ಮುನಿಗಳು, ಸಂನ್ಯಾಸಿಗಳು, ಸಚ್ಚರಿತರು, ಮೊದಲಾದ ತ್ಯಾಗಿ ಮಹಾತ್ಮರನೇಕರು ಲೋಕಕಲ್ಯಾಣಕ್ಕಾಗಿ ಅನಾದಿ ಕಾಲದಿಂದ ಈ ಲೋಕದಲ್ಲಿ ಶ್ರಮಿಸುತ್ತಿರುವರು. ಇವರೆಲ್ಲರಿಗಿಂತ ಹೆಚ್ಚಿನ ತ್ಯಾಗಿ, ಲೋಕೋಪಕಾರಿಯಾದವನು ನಿಜನಾದ ರಾಜನು. ನಮ್ಮ ಹಿರಿಯರ ರಾಜತ್ವದ ಈ ಉಚ್ಚ ಆದರ್ಶವೂ ವಿಕ್ರಮಾಂಕ ಚಕ್ರವರ್ತಿಯ ಪ್ರತ್ಯಕ್ಷ ಉದಾಹರಣೆಯೂ ರಾಜಧರ್ಮದ ಆಚರಣೆಯಲ್ಲಿ ನಿನಗೆ ಸದಾ ಮಾರ್ಗದರ್ಶಿಯಾಗಲಿ. ಓಂ ಸ್ವಸ್ತಿ!"

---

# ವಸಂತ ಗ್ರಂಥಮಾಲೆ

---

**ನಾಲ್ಕನೆಯ ಕುಸುಮ**

**"ರತ್ನಸಿಂಹಾಸನ" :** ಶ್ರೀ ಮ. ನರಸಿಂಹಮೂರ್ತಿ, ಬಿ ಎ.
ಮೈಸೂರು ರಾಜ್ಯಸ್ಥಾಪಕರಾದ ರಾಜವೊಡೆಯರನ್ನು ಕುರಿತ ರಮ್ಯರೂಪಕ. ರಾಜವೊಡೆಯರವರ ಪ್ರಾಚೀನ ಚಿತ್ರದೊಂದಿಗೆ.

**ಐದನೆಯ ಕುಸುಮ**

**"ಮನೆಗೆ ಬಂದ ಮಹಾಲಕ್ಷ್ಮೀ"** : ಶ್ರೀ ತ. ರಾ. ಸುಬ್ಬರಾಯ.
ಸಾಮಾಜಿಕ ಸಮಸ್ಯೆಯೊಂದರ ಮೇಲಣ ಮನೋವಿಶ್ಲೇಷಣಾತ್ಮಕ ಕಾದಂಬರಿ.

---

## ಪ್ರಕಟವಾಗಿವೆ

೧. **ಕಾಮನ ಸೋಲು :** ಶ್ರೀ ಅ. ನ. ಕೃಷ್ಣರಾಯ :
ಹನ್ನೆರಡು ಕಥೆಗಳ ಸಂಗ್ರಹ.

೨. **ಸಂಧ್ಯಾಕಾಲ :** ಪ್ರೊ. ರಂ. ವಾ. ಜಾಗಿರದಾರ:
ಮೂರಂಕಿನ ನಾಟಕ.

---

ಮುಂಬೈ ಕರ್ನಾಟಕದ ನಮ್ಮ ಪ್ರತಿನಿಧಿಗಳು :

**ಕರ್ನಾಟಕ ಸಾಹಿತ್ಯ ಮಂದಿರ, ಧಾರವಾಡ**